ಸಕಾರಣ ಅನುಮಾನ ನನ್ನನ್ನೇ ಕಾಡುತ್ತಿದೆ. ಸಿದ್ಧರಾಮನ ಲಿಂಗದೀಕ್ಷೆಯ ವಿಷಯದಲ್ಲಿ ತಮ್ಮ ವಾದಕ್ಕೇ ಅಂಟಿಕೊಂಡು ಕೆಲವು ನಿಷ್ಠುರ ಸನ್ನಿವೇಶಗಳನ್ನೂ ತಾಳ್ಮೆಯಿಂದಲೇ ಎದುರಿಸಿದ ಡಿ.ಎಲ್. ನರಸಿಂಹಾಚಾರ್ಯರು ತಮ್ಮ ವಾದಕ್ಕೆ ವಿರುದ್ಧವಾದ ಸಾಕ್ಷ್ಯಾಧಾರವು ತಮ್ಮ ಗಮನಕ್ಕೆ ಬಂದೊಡನೆ ಮುಕ್ತಮನಸ್ಸಿನಿಂದ ತಮ್ಮ ವಾದವನ್ನು ಕೈಬಿಟ್ಟು ಲೇಖನ ಬರೆದರು. ಅದರಿಂದ ಅವರು ದೊಡ್ಡವರೆನಿಸಿಕೊಂಡರು. "ಸತ್ಯವನ್ನು ನಾನು ಕಂಡೆ" ಎಂದು ಹೇಳಿಕೊಳ್ಳುವುದರಲ್ಲಿ ತಪ್ಪಿಲ್ಲವಾದರೂ ಪ್ರತಿಯೊಬ್ಬ ನಿಜವಾದ ಸಂಶೋಧಕನೂ ಒಂದು ಸತ್ಯವು ಹೊರಬರಲು ನಾನು ನಿಮಿತ್ತನಾದೆ, ಸತ್ಯವು ಪ್ರಕಾಶಗೊಳ್ಳಲು ನನ್ನನ್ನು ಆರಿಸಿಕೊಂಡು ಉಪಕಾರ ಮಾಡಿತು, ಧನ್ಯನನ್ನಾಗಿ ಮಾಡಿತು ಎಂದೇ ಭಾವಿಸುತ್ತಾನೆ. ಗಿರಿಜೆಯು ಮೇನಕೆಗೆ ಮಗುವಾಗಿ ಜನಿಸಿದಾಗ ಆ ಲೋಕಮಾತೆ ದಾಕ್ಷಾಯಣಿಯು ಜಗತ್ತಿಗೆ ವ್ಯಕ್ತವಾಗಲು ಮೇನಕೆ ನಿಮಿತ್ತವಾದಳೇ ಹೊರತು ಅವಳೇ ತಾಯಿ ಅಲ್ಲ ಎಂಬ ಮಾತನ್ನು ಹರಿಹರ ಹೇಳುವಾಗ, ಸೂರ್ಯನು ಪೂರ್ವದಿಗಂತದಿಂದ ಮೂಡಿಬಂದಂತೆ ಎಂಬ ಉಪಮೆಯನ್ನು ಕೊಡುತ್ತಾನೆ. ಆ ಮಾತು ಎಲ್ಲ ಸಂಶೋಧಕರಿಗೂ ದಾರಿದೀಪವಾಗಿರಬೇಕು. ಸಂಶೋಧಕನಿಗೆ ಒಂದು ಸತ್ಯ ಕಾಣಿಸದಿದ್ದರೆ ಮುಂದೊಮ್ಮೆ ಯಾವನೋ ಸಂಶೋಧಕನಿಗೆ ಕಾಣಿಸುತ್ತಿತ್ತು.

ವಿ. ಸೀತಾರಾಮಯ್ಯನವರ "ಮಣಿಯದಿಹ ಮನವೊಂದು, ಸಾಧಿಸುವ ಹಠವೊಂದು, ನಿಜದ ನೇರಕೆ ನಡೆವ ನಿಶ್ಚಲತೆಯೊಂದು" ಎಂಬ ಕಾವ್ಯಭಾಗ ದೈನಂದಿನ ಬದುಕಿಗೆ ಹೇಗೋ ಸಂಶೋಧಕನಿಗೂ ದಾರಿದೀಪವಾಗಿರಬೇಕು. ಮುಕ್ತಮನಸ್ಸು, ನಿರಂತರ ಪ್ರಯತ್ನ, ನಿಜದ ಕಡೆಗೇ ಹೋಗುವೆನೆಂಬ , ಹೋಗಬೇಕೆಂಬ ದೃಢನಿಶ್ಚಯ ಇವು ಸಂಶೋಧಕನ ಮುಖ್ಯ ಲಕ್ಷಣ. ಮೇರೆಯರಿಯದ ಶ್ರಮ, ವ್ಯವಸ್ಥಿತ ಚಿಂತನೆ, ನಿರಂತರ ಉತ್ಸಾಹ ಇವೂ ಅಷ್ಟೇ. ಅಂತಹ ಶ್ರಮ ಎಂದೋ ಒಂದು ದಿನ ಖಂಡಿತ ಫಲ ನೀಡುತ್ತದೆ. ಆ ಫಲ ಸಾರ್ವಜನಿಕರಿಗೆ ಸತ್ಯದ ದರ್ಶನ ಮಾಡಿಸುತ್ತದೆ, ವ್ಯಕ್ತಿಗೆ ಪಾಂಡಿತ್ಯ ರಸಾನುಭವವನ್ನೂ ನೀಡುತ್ತದೆ. ಸಂಶೋಧಕನೊಬ್ಬ ಮಾಡಿರಬಹುದಾದ ತಪ್ಪನ್ನು ಇನ್ನೊಬ್ಬ ಸಂಶೋಧಕ ತಿದ್ದಿದಾಗ, ಆ ಶೋಧದ ಯಶಸ್ಸಿನ ಒಂದು ಭಾಗ ಮೊದಲನೆಯವನಿಗೂ ಸಲ್ಲುತ್ತದೆ. ಅವನ ತಪ್ಪು ಇವನ ಒಪ್ಪಕ್ಕೆ ಪ್ರೇರಣೆಯಾಯಿತು ತಾನೇ! ವಿ.ಸೀ. ಅವರ ಮೇಲೆ ಹೇಳಿದ "ಅಭೀಃ" ಕವನ ಮುಂದುವರಿದು ಹೇಳುತ್ತದೆ - "ಅನ್ಯಾಯಕೆಂದೆಂದು ಬಾಗದೆಚ್ಚರವೊಂದು" - ಒಮ್ಮೊಮ್ಮೆ ಸಂಶೋಧಕ ಸತ್ಯವನ್ನು ಹೇಳಲು ಹೆದರಿ ಮುದುರಿಕೊಳ್ಳಬೇಕಾದ ಸಂದರ್ಭಗಳು ಬಂದಾಗಲೂ ಅವನೊಬ್ಬ ಅಭೀಃ - ನಿರ್ಭಯ ಸ್ವಭಾವದ ವ್ಯಕ್ತಿಯಾಗಿದ್ದರೆ, ಅದಕ್ಕೂ ಸಿದ್ಧನಾಗಬೇಕು. ಜೀವನದಲ್ಲಿ ಹೇಗೋ ಸಂಶೋಧನೆಯಲ್ಲೂ ವ್ಯಕ್ತಿಯ ಸತ್ಯಪ್ರಿಯತೆ ಸಾಬೀತಾಗುವುದು ಅಂತಹ ಸಂದರ್ಭಗಳನ್ನು ನಿರ್ಭಯವಾಗಿ

ಎದುರಿಸಿದಾಗ ಮಾತ್ರ. ಯಾವುದೇ ಅಹಂಕಾರದ ಭಯವಿಲ್ಲದೆ ಹೇಳುತ್ತೇನೆ : ನನಗಿಂತ ದೊಡ್ಡ ಸಂಶೋಧಕರು ಕನ್ನಡದಲ್ಲಿ ಆಗಿ ಹೋಗಿದ್ದಾರೆ. ಆದರೆ ನನ್ನಷ್ಟು ಉತ್ಕಟ ಸನ್ನಿವೇಶಗಳನ್ನು ಎದುರಿಸಿದವರು ಇಲ್ಲಿಯವರೆಗೆ ಕನ್ನಡದಲ್ಲಿ ಇಲ್ಲವೇ ಇಲ್ಲ.

ಸ್ವಲ್ಪ ತಮಾಷೆಯಾದರೂ ವಾಸ್ತವ ಸಂಗತಿಯೊಂದಿದೆ. ಕಾವ್ಯ, ನಾಟಕ, ಕತೆ, ಕಾದಂಬರಿ, ವಿಮರ್ಶೆ ಬರೆದವರ ಬರಹಗಳು ಅವರ ಹೆಸರಿನೊಂದಿಗೇ ಕಾಲದ ಪ್ರವಾಹದಲ್ಲಿ ಮುಂದುವರಿಯುತ್ತವೆ. ಕಾಲ ಕಳೆದಂತೆ ಸಂಶೋಧಕನೊಬ್ಬನ ಶೋಧವು ಉಳಿದಿರಬಹುದು, ಸಂಶೋಧಕನ ಹೆಸರು ಮರೆತು ಹೋಗಬಹುದು. ಉದಾಹರಣೆಗೆ, ಪಂಪನ ಶಾಸನದ ಬಗ್ಗೆ ಮಾತನಾಡುವವರು ಅದನ್ನು ಶ್ರಮವಹಿಸಿ ಗುರುತಿಸಿ ಓದಿ ಆ ಬಗ್ಗೆ ಚರ್ಚೆಯನ್ನು ಆರಂಭಿಸಿದ ಡಾ. ವೆಂಕಟರಮಣಯ್ಯನವರ ಹೆಸರನ್ನೇ ಮರೆಯಬಹುದು. ಒಂದು ಸಾಹಿತ್ಯ ಕೃತಿರಚನೆ ಮಾಡಿದ ಲೇಖಕನ ಹೆಸರು ಕೃತಿಯ ಜೊತೆ ಜೊತೆಗೇ ಉಳಿಯುವಂತೆ ಪ್ರಚುರವಾಗುವಂತೆ ಒಂದು ಸಂಶೋಧನೆಯ ಜೊತೆ ಸಂಶೋಧಕರ ಹೆಸರು ಮುಂದೆ ಉಳಿಯುವುದಿಲ್ಲ (ಎಲ್ಲೋ ಕೆಲವರನ್ನು ಹೊರತುಪಡಿಸಿ.) ಅದಕ್ಕೆ ಆ ಸಂಶೋಧಿತ ಸತ್ಯ ಅವನದಾಗಿರದೆ ಅವನ ಮೂಲಕ ವ್ಯಕ್ತವಾಗಿರುವುದಾಗಿರುವುದೇ ಕಾರಣ. ಇತಿಹಾಸೋಗ್ರಫಿಯಲ್ಲಿ (Historiography, ಎಂದರೆ ಇತಿಹಾಸದ ಇತಿಹಾಸದಲ್ಲಿ) ಅವರ ಹೆಸರುಗಳು ದಾಖಲಾಗಹುದು ಅಥವಾ ಅಲ್ಲೂ ಕೈಬಿಟ್ಟು ಹೋಗಬಹುದು. ಇಂತಹ ಮಾತು, ಸಂಶೋಧನೆಯ ಜೊತೆ ಸಂಶೋಧಕನ ಹೆಸರೂ ಉಳಿದುಬರುವಂತಹ ಮಾತು ಸಾಹಿತ್ಯ ಕ್ಷೇತ್ರದ ಸಂಶೋಧಕರಿಗೆ ಮಾತ್ರ ಅನ್ನಿಸುವಂತಹುದು. ಅಲ್ಲೂ ಅವರು, ಸಾಹಿತ್ಯಕ ಸಂಶೋಧಕರು ಒಂದು ಸಮಾಧಾನ ಪಟ್ಟುಕೊಳ್ಳಬಹುದು ಅಗತ್ಯವಿದ್ದರೆ, ತಮ್ಮ ಮನಸ್ಸಿಗೆ ಸಮಾಧಾನ ಬೇಕಿದ್ದರೆ. ಒಂದು ಸಾಹಿತ್ಯ ಕೃತಿ ಉಳಿಯುವುದು ಅದರ ಅಭಿವ್ಯಕ್ತಿ ವಿಧಾನದಿಂದ, ಭಾಷೆಯ ಬಳಕೆಯಿಂದ, ಅದರ ರಸಮೌಲ್ಯದಿಂದ (Aesthetic Value). ರಸಮೌಲ್ಯಗಳು ಎಲ್ಲ ಕಾಲಕ್ಕೂ ಒಂದೇ ರೀತಿಯಾಗಿ ಉಳಿಯುವವೆಂದು ಹೇಳುವುದು ಕಷ್ಟ. ಒಂದು ಕಾಲದ ಉತ್ಕೃಷ್ಟ ಕೃತಿ ಇನ್ನೊಂದು ಕಾಲಕ್ಕೆ ತನ್ನ ಸ್ಥಾನದಿಂದ ಚ್ಯುತಗೊಳ್ಳಬಹುದು, ಅಥವಾ ಮೂಲೆಗುಂಪಾಗಬಹುದು. ಸಂಶೋಧನೆಯು ಅದರ ಅಭಿವ್ಯಕ್ತಿ ವಿಧಾನವನ್ನಲಂಬಿಸದೆ ಅದು ನಿರೂಪಿಸುವ ಸತ್ಯವನ್ನವಲಂಬಿಸಿರುವುದಾದ್ದರಿಂದ ಅದು ಉಳಿಯುತ್ತದೆ, ಶಾಶ್ವತವಾಗಿ. ಕೊನೆಯ ಪಕ್ಷ ತಾತ್ವಿಕವಾಗಿಯಾದರೂ (Theoretically) ಹಾಗೆಂದು ಹೇಳಬಹುದು. ಅದು ಹಳತಾಯಿತೆಂಬ ಪ್ರಶ್ನೆಯೇ ಉದ್ಭವವಾಗುವುದಿಲ್ಲ. ಸಾಹಿತ್ಯ ಕ್ಷೇತ್ರದಲ್ಲೆಂತೋ ವಿದ್ವತ್ ಕ್ಷೇತ್ರದಲ್ಲೂ ಮಹಾಕಳ್ಳತನಗಳಾಗಿವೆ. ಒಬ್ಬ ವ್ಯಕ್ತಿ ಮಾಡಿದ ಕೆಲಸವನ್ನು ದೊಡ್ಡ ಹೆಸರಿನವರು ತಮ್ಮ ಹೆಸರಲ್ಲಿ ಪ್ರಕಟಿಸಿದ್ದುಂಟು. ಅಂತಹ ಸಾಹಿತ್ಯ ಮತ್ತು ಸಂಶೋಧನ

ಕ್ಷೇತ್ರಗಳ ಒಂದೊಂದು ದೊಡ್ಡ ಉದಾಹರಣೆಯನ್ನು ನಾನು ಪ್ರತ್ಯಕ್ಷ ಬಲ್ಲೆನಾದರೂ ಅವನ್ನು ಹೇಳುವುದಕ್ಕೆ ಇದು ಸ್ಥಳವಲ್ಲ (ಸಣ್ಣ ಉದಾಹರಣೆಗಳೂ ಹಲವುಂಟು.) ಅದೊಂದು ನೋವಿನ ಕತೆ. ನವರಸ, ಪಾಂಡಿತ್ಯರಸಗಳ ಪ್ರಸ್ತಾಪವಾಗಿರುವ ಈ ಪುಸ್ತಕದಲ್ಲಿ ಆ ರಸಭಂಗದ ಪ್ರಸ್ತಾಪ ಬೇಡ.

ತರಗತಿಯಲ್ಲಿ ಉಪಧ್ಯಾಯರು ಮಾಡಿದ ಪಾಠ ಮತ್ತು ಹೊರಗಡೆ ಅವರು ಕೊಟ್ಟ ಸೂಚನೆಗಳಂತೆ ಓದಿ ವಿದ್ಯಾರ್ಥಿ ಪದವೀಧರನಾಗುತ್ತಾನೆ. ಅವನು ತನ್ನ ಮಾರ್ಗದರ್ಶಕ ತೋರಿದ ಮಾರ್ಗದಲ್ಲಿ ಕೆಲಸ ಮಾಡಿ ಪಿಎಚ್.ಡಿ. ಪದವಿಯನ್ನೂ ಸಂಪಾದಿಸುತ್ತಾನೆ. ಡಾ. ಆ.ನೇ. ಉಪಾಧ್ಯೆಯವರು ಒಮ್ಮೆ ನನಗೆ ಹೇಳಿದ್ದರು - "ಪಿಎಚ್.ಡಿ. ಎಂಬುದು ಸಂಶೋಧನೆ ಮಾಡಿದ್ದಕ್ಕಾಗಿ ಒಂದು ವಿಶ್ವವಿದ್ಯಾಲಯ ಕೊಟ್ಟ ಪ್ರಶಸ್ತಿ ಪತ್ರ ಅಲ್ಲ. ಅದು ಆ ವ್ಯಕ್ತಿ ಸಂಶೋಧನೆ ಮಾಡಬಲ್ಲನೆಂಬುದಕ್ಕೆ ನೀಡಿದ ಶಿಫಾರಸು ಪತ್ರ". ಈ ಮಾತು ಶ್ರೇಷ್ಠ ವಿದ್ವಾಂಸರೊಬ್ಬರ ಬಾಯಲ್ಲಿ ಬಂದುದು, ಅವರು ಸದಾ ಸಂಶೋಧನೆಯಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದುದು ಆ ಮಾತಿಗೆ ನಿಜವಾದ ಅರ್ಥವನ್ನು ತಂದುಕೊಟ್ಟುದಾಗಿದ್ದು ಇಂದಿನ ಪಿಎಚ್.ಡಿ. ಪದವೀಧರರು ಮುಖ್ಯವಾಗಿ ಲಕ್ಷಿಸಬೇಕಾದುದು. ಅದೇ ಸಂದರ್ಭದಲ್ಲಿ ಅವರು ನನಗೆ ಹೇಳಿದ ಒಂದು ಘಟನೆ ಹೀಗಿದೆ. ಆಕ್ಸ್‌ಫರ್ಡ್ ವಿಶ್ವವಿದ್ಯಾಲಯದ ಸಂಸ್ಕೃತ ವಿಭಾಗದ ಪ್ರತಿಷ್ಠಿತ ಬೋಡೆನ್ ಪ್ರಾಧ್ಯಾಪಕ ಸ್ಥಾನಕ್ಕೆ ಇಬ್ಬರು ಅಭ್ಯರ್ಥಿಗಳಾಗಿ ಹೋಗಿ ಮೊದಲು ಯಾರು ಸಂದರ್ಶಕ ತಜ್ಞರ ಮುಂದೆ ಹಾಜರಾದರು, ನೆನಪಿಲ್ಲ - ಆ ಇಬ್ಬರಲ್ಲಿ ಒಬ್ಬರಾದ ಮೋನಿಯರ್ ವಿಲಿಯಂಸರಿಗೆ ಆಯ್ಕೆ ಸಮಿತಿಯ ತಜ್ಞರು ಹೇಳಿದರು : "ನೀವು ಈ ಸಂದರ್ಶನಕ್ಕೆ ಬಂದುದೇ ಒಂದು ಸೌಭಾಗ್ಯ. ನಿಮ್ಮ ಸಂಶೋಧನೆ ಬಗ್ಗೆ ನಾವು ಕೇಳುವುದೇನೂ ಇಲ್ಲ". ಅದಕ್ಕೆ ವಿಲಿಯಂಸ್, "ಅದು ನಿಜವಿರಬಹುದು. ಆದರೆ ಹೊರಗೆ ಕಾದಿರುವ ಇನ್ನೊಬ್ಬರು ನನಗಿಂತ ಹೆಚ್ಚು ಕೆಲಸ ಮಾಡಿದ್ದಾರೆ, ನಿಮಗೆ ನೆನಪಿರಲಿ" ಎಂದು ಹೇಳಿ ಹೊರಬಂದರು. ಬಳಿಕ ಹಾಜರಾದ ಮ್ಯಾಕ್ಸ್ ಮುಲರ್‌ಗೆ ಅದೇ ತಜ್ಞರು ಮೇಲಿನಂತಹುದೇ ಮಾತನಾಡಿದಾಗ ಹೇಳಿದರು, "ಇರಬಹುದು, ಆದರೆ ಗಮನಿಸಿ. ಇದೇ ತಾನೇ ಸಂದರ್ಶನ ಮುಗಿಸಿಕೊಂಡು ಹೊರ ಹೋದವರು ನನಗಿಂತ ಹೆಚ್ಚು ಕೆಲಸ ಮಾಡಿದ್ದಾರೆ". ಸಮಿತಿಗೆ ಆ ಇಬ್ಬರಲ್ಲಿ ಒಬ್ಬರನ್ನು ಆರಿಸುವುದು ಕಷ್ಟವಾಗಿ ಜರ್ಮನ್ ಮೂಲದ ಮ್ಯಾಕ್ಸ್ ಮುಲರ್ ಬಿಟ್ಟು ಸ್ಥಳೀಯ ಮೂಲದ ಮೋನಿಯರ್ ವಿಲಿಯಂಸರನ್ನು ಆರಿಸಿದರು. ಆ ಘಟನೆಯನ್ನು ಕೇಳಿದಾಗ ನನಗೆ ಆದ ಅನುಭವವನ್ನು ಓದುಗರ ಊಹೆಗೆ ಬಿಡುತ್ತೇನೆ.

ಮುಂದೊಮ್ಮೆ ಅದೇ ಬೋಡೆನ್ ಪ್ರಾಧ್ಯಾಪಕರಾದ ಟಿ.ಬರೋ ಬಗ್ಗೆ ತೀ.ನಂ.ಶ್ರೀ. ಹೇಳಿದ್ದು. ಅವರು ಆ ಸ್ಥಾನಕ್ಕೆ ಆಯ್ಕೆಗೊಂಡು ಆಕ್ಸ್‌ಫರ್ಡ್

ವಿಶ್ವವಿದ್ಯಾಲಯಕ್ಕೆ ಹೋದ ದಿನ ಸಂಸ್ಕೃತಕ್ಕೆ ಎಷ್ಟು ವಿದ್ಯಾರ್ಥಿಗಳಿದ್ದಾರೆ ಎಂದು ಕೇಳಿದರು. ಕುಲಪತಿಗಳಿಂದ ಬಂದ ಉತ್ತರ -"ನೋಡಿ ಪ್ರಾಧ್ಯಾಪಕರೇ, ನಾವು ವಿದ್ಯಾರ್ಥಿಗಳಿಗೆ ಪ್ರಾಧ್ಯಾಪಕರಿರುವ ಖಾತ್ರಿ ಕೊಡುತ್ತೇವೆ. ಆದರೆ ಪ್ರಾಧ್ಯಾಪಕರಿಗೆ ವಿದ್ಯಾರ್ಥಿಗಳಿರುವ ಬಗ್ಗೆ ಖಾತ್ರಿ ನೀಡಲಾರೆವು." ಅದನ್ನು ಅರ್ಥಮಾಡಿಕೊಂಡ ಬರೋ ತಾವು ಏನು ಮಾಡಬೇಕೆಂದು ಕೇಳಿದಾಗ, ಅವರು ವಿಶ್ವದ ಇಷ್ಟ ಬಂದ ಕಡೆ ಹೋಗಿ ಸಂಶೋಧನೆ ನಡೆಸಲು ಸಲಹೆ ಬಂತು. ಅದರಂತೆ ಅವರು ಭಾರತಕ್ಕೆ ಬಂದು ಸಂಸ್ಕೃತ ವಿದ್ವಾಂಸರಾಗಿದ್ದರೂ (ಅವರ The Sanskrit Language ಒಂದು ಶ್ರೇಷ್ಠ ಕೃತಿ) ದಕ್ಷಿಣ ಭಾರತಕ್ಕೆ ಬಂದು ದ್ರಾವಿಡ ಭಾಷೆಗಳ ಬಗ್ಗೆ ಕೆಲಸ ಮಾಡಿ ಹಲವು ಸಂಪ್ರಬಂಧಗಳನ್ನು ಬರೆದರು (ಮೈಸೂರಲ್ಲಿ ಹಲವು ಕಾಲ ಇದ್ದ ಅವರಿಗೆ ಕನ್ನಡದ ವಿಷಯದಲ್ಲಿ ತೀ.ನಂ.ಶ್ರೀ. ಸಹಾಯ ಮಾಡಿದರು.) ಹೀಗಿದೆ ನಿಜವಾದ ವಿದ್ವಾಂಸರ ಪರಸ್ಪರ ಗೌರವ ಮತ್ತು ವಿದ್ವಾಂಸರ ನಿರಂತರ ವ್ಯವಸಾಯ : ಬೋಧನೆಯ ಜವಾಬ್ದಾರಿ ಜೊತೆ ಅಥವಾ ಬೋಧನೆ ಇಲ್ಲದಿದ್ದರೂ ಸಂಶೋಧನೆಯ ಕೃಷಿ.

ಕನ್ನಡ ಸಾಹಿತ್ಯ ಪರಿಷ್ತು ತೀ.ನಂ.ಶ್ರೀ.ಯವರನ್ನು ಸಮ್ಮೇಳನಾಧ್ಯಕ್ಷರನ್ನಾಗಿ ಆಯ್ಕೆ ಮಾಡಿತು. ಅವರು ತಮಗಿಂತ ಅರ್ಹರಿದ್ದಾರೆ ಎಂದು ಹೇಳಿದ್ದರಿಂದ ಪರಿಷತ್ತು ಡಿ.ಎಲ್.ಎನ್. ಅವರನ್ನು ಆರಿಸಿತು. ತೀ.ನಂ.ಶ್ರೀ. ಆ ಸ್ಥಾನವನ್ನು ತಿರಸ್ಕರಿಸಿದ್ದುದು ಡಿ.ಎಲ್.ಎನ್.ರಿಗೆ ಗೊತ್ತಿರಲಿಲ್ಲ. ಪ್ರಕೃತಿ ಪ್ರೇಮ, ಬಡವರ ಬಗ್ಗೆ ಕರುಣೆ, ರಾಷ್ಟ್ರೀಯತೆ, ಸಾಮಾಜಿಕ ಪ್ರಜ್ಞೆ ಇವುಗಳ ಬಗ್ಗೆ ಬರೆಯುವ ಸಾಹಿತ್ಯ ಕ್ಷೇತ್ರದ ಕೆಲವರಿಗೆ ಸಂಶೋಧನ ಕ್ಷೇತ್ರದ ವ್ಯಕ್ತಿಗಳೆಂದರೆ ಜಡರು, ನೀರಸರು, ಮಾನವೀಯ ಗುಣಗಳಿಂದ ದೂರವಿರುವವರು ಎಂಬ ಏನೆಲ್ಲ ತಪ್ಪು ಕಲ್ಪನೆಗಳಿರುತ್ತವೆ. ಮೂಲಭೂತವಾಗಿ ಸಂಶೋಧಕರೆಂದು ಗುರುತಿಸಬಹುದಾದ ಕ.ವೆಂ. ರಾಘವಾಚಾರ್ಯರನ್ನು ನಾವು "ದೂರ್ವಾಸ"ರೆಂದೇ ಕರೆಯುತ್ತಿದ್ದೆವು - ಆಗ ನಾವು ವಿದ್ಯಾರ್ಥಿಗಳು, ಹುಡುಗರು. ಸದಾ ಮುಖವನ್ನು ಸಿಂಡ್ರಿಸಿಕೊಂಡಿರುತ್ತಿದ್ದ ಅವರು ಸ್ವಲ್ಪ ಮುಂಗೋಪಿಗಳೂ ಆಗಿದ್ದರು. ನಮಗೆ ಓದಲು ಬೇಕಾದ ಪುಸ್ತಕವನ್ನು ಕೇಳಲು ಅವರ ಮನೆಗೆ ಹೆದರಿಕೊಂಡೇ ಹೋದರೆ "ಕೂತ್ಕೋ" ಎಂದು - ಸಿಡುಕಿನಿಂದ ಎಂದರೆ ತಪ್ಪಾದೀತು, ನಮಗೆ ಹಾಗನ್ನಿಸುತ್ತಿತ್ತು ಅಷ್ಟೇ - ಹೇಳಿ ಕುಳ್ಳಿರಿಸಿ ಒಳಗಿನಿಂದ ದೋಸೆಯನ್ನೋ ಪುಳಿಯೋಗರೆಯನ್ನೋ ತಂದು ತಿನ್ನಲು ಕೊಟ್ಟು ಪುಸ್ತಕವನ್ನೂ ಕೊಟ್ಟು ಕಳಿಸುತ್ತಿದ್ದರು. ಸಂಶೋಧಕರಲ್ಲೂ ಹೃದಯ ಶ್ರೀಮಂತರುಂಟು, ಸಾಹಿತಿಗಳಲ್ಲೂ ಉಂಟು; ಅಥವಾ ಎರಡೂ ಕ್ಷೇತ್ರಗಳಲ್ಲಿ ನೀರಸ ಹೃದಯರೂ ಸ್ವಾರ್ಥಿಗಳೂ ಉಂಟು. ಸಾಹಿತ್ಯ ಕ್ಷೇತ್ರದ ಒಂದು ಅನುಕೂಲವೆಂದರೆ ಆಕರ್ಷಕ ಮಾತು ಬರಹಗಳಿಂದ ತಮ್ಮ ಕೊರತೆಗಳನ್ನು ಮುಚ್ಚಿಕೊಳ್ಳಲು ಅವಕಾಶವಿರುತ್ತದೆ.

ಹತ್ತಿರದಿಂದ ಕಂಡವರಿಗೆ ಸಂಶೋಧಕರೂ ಎಲ್ಲರಂತೆ ಮನುಷ್ಯರೆಂಬುದು ತಿಳಿದಿರುತ್ತದೆ. ಸಂಶೋಧನೆಯ ಬಗ್ಗೆ ತಪ್ಪು ಕಲ್ಪನೆಗಳಿರುವುದು ಸಾಹಿತ್ಯ ಕ್ಷೇತ್ರದಲ್ಲಿ ಮಾತ್ರ. ಉಳಿದೆಲ್ಲ ಕಡೆ ಸಂಶೋಧಕನಿಗೇ ಅಗ್ರಸ್ಥಾನವೆಂಬುದನ್ನು ಎಲ್ಲರೂ ಬಲ್ಲರು. ಹಾಗೆ ನೋಡಿದರೆ ವಿಜ್ಞಾನ, ಸಮಾಜ ವಿಜ್ಞಾನ ಕ್ಷೇತ್ರಗಳ ಜನರು ಸಾಹಿತ್ಯ ಕ್ಷೇತ್ರದವರನ್ನು ಬರೀ ಭಾವುಕರು, ಕಲ್ಪನಾ ಗಗನವಿಹಾರಿಗಳು, ಭಾಷಣಕ್ಕೆ ಮಾತ್ರ ಅರ್ಹರು, ಬೇರೆ ಅರ್ಹತೆಯಿಲ್ಲದ್ದರಿಂದ ಸಾಹಿತ್ಯವನ್ನು ಆರಿಸಿಕೊಂಡವರು ಎಂಬ ಸ್ವಲ್ಪ ಹಗುರ ಭಾವನೆಯಿಂದಲೇ ನೋಡುತ್ತಾರೆ. ಒಮ್ಮೆ ವಿಜ್ಞಾನ ವಿಭಾಗದ ಅಧ್ಯಾಪಕ ಗೆಳೆಯನೊಬ್ಬ ನನಗೆ ಹೀಗೆ ತಮಾಷೆ ಮಾಡಿದ್ದರು– ಕೇವಲ ಸ್ನೇಹದಿಂದ, “ಮೂರ್ತಿಗಳೇ, ನೀವು ಹೇಳುತ್ತಿರುವುದು ನಿಜವೋ ಸಾಹಿತ್ಯವೋ”. ನಾನಂತೂ ಆ ಮಾತಿನಿಂದ ನಕ್ಕು ನಕ್ಕು ಬಿದ್ದೆ. ವಿಜ್ಞಾನ ಕ್ಷೇತ್ರದ ಕೆಲವರು ಸಾಹಿತ್ಯವನ್ನು ನೋಡುವುದು ಹಾಗೆ. ಸಾಹಿತ್ಯ, ಸಾಹಿತ್ಯೇತರ ಕ್ಷೇತ್ರಗಳ ವಿವೇಕಿಗಳು ಪರಸ್ಪರ ಲಘುವಾಗಿ ಯೋಚಿಸುವುದಿಲ್ಲವೆಂಬುದನ್ನು ಮತ್ತೆ ಹೇಳಬೇಕಾಗಿಲ್ಲ.

ಯಾವುದೇ ಕ್ಷೇತ್ರವಾಗಲಿ, ಅದರಲ್ಲಿ ತನ್ಮಯತೆಯಿಂದ ತೊಡಗಿಸಿಕೊಳ್ಳುವುದು ಮುಖ್ಯ, ಅಷ್ಟೇ. ಆರ್. ನರಸಿಂಹಾಚಾರ್, ಎಂ.ಎ. ರಾಮಾನುಜ ಅಯ್ಯಂಗಾರ್, ಬೆಳ್ಳಾವೆ ವೆಂಕಟನಾರಾಯಣಪ್ಪ, ಕೆ.ಜಿ. ಕುಂದಣಗಾರ, ಫ.ಗು. ಹಳಕಟ್ಟಿ, ಶಿ.ಶಿ. ಬಸವನಾಳ, ಡಿ.ಎಲ್.ಎನ್., ತೀ.ನಂ.ಶ್ರೀ, ಎಚ್. ದೇವೀರಪ್ಪ, ಎಲ್. ಬಸವರಾಜು ಇವರೇ ಮೊದಲಾದ ವಿದ್ವಾಂಸರು ಹುಳು ಹತ್ತಿದ ಹಸ್ತಪ್ರತಿಗಳನ್ನು ಸಂಗ್ರಹಿಸಿ ಒರಸಿ ಕಷ್ಟಪಟ್ಟು ಓದಿ ಚರಿತ್ರೆ ಬರೆಯದೇ ಇದ್ದಿದ್ದರೆ, ಪ್ರತಿ ಮಾಡಿ ಸಂಪಾದಿಸಿ (Edit) ಕೊಡದಿದ್ದರೆ ಆಧುನಿಕ ಪೂರ್ವ ಸಾಹಿತ್ಯ ಓದಲು ಇರಲಿ, ನೋಡಲಿಕ್ಕಾದರೂ ಎಲ್ಲಿ ಸಿಗುತ್ತಿತ್ತು? ಇದೆಲ್ಲ ಬರೆಯುವುದು ವ್ಯರ್ಥವೆನ್ನಿಸಿದರೂ ಅದರಲ್ಲೂ ಕಳೆದ ಹತ್ತು ಹದಿನೈದು ವರ್ಷಗಳ ಅವಧಿಯಲ್ಲಿ ನಡೆದಿರುವ ವಿದ್ಯಮಾನಗಳ ಕೆಲವು ವಾಸ್ತವಗಳನ್ನು ಬಲ್ಲ ನಾನು ಅದನ್ನು ಇಲ್ಲಿ ಬರೆಯಲೇಬೇಕಾಗಿದೆ.

ಈ ಪುಸ್ತಿಕೆ ತರುಣ ಸಂಶೋಧಕರಿಗೆ ಉತ್ಸಾಹವನ್ನು ತುಂಬುವಂತಾಗಲಿ ಎಂಬ ಸೂಕ್ಷ್ಮ ಸಹಜ ಬಯಕೆ ಎಲ್ಲ ಲೇಖಕರಿಗಿರುವಂತೆ ನನಗೂ ಇದೆಯಾದರೂ, ಈ ಕೃತಿಯನ್ನು ಬರೆಯುವುದರಲ್ಲಿ ಎಲ್ಲ ಲೇಖಕರಂತೆ ನಾನೂ ಸಂತೋಷ ಪಟ್ಟಿದ್ದೇನೆ ಮಾತ್ರವಲ್ಲ, ನನ್ನೊಳಗಿನ ತೀವ್ರೋತ್ಸಾಹದ ಸಂಶೋಧಕನಿಗೆ ತಾರುಣ್ಯವನ್ನೂ ತಂದುಕೊಟ್ಟಿದ್ದೇನೆ ಎಂದೂ ಹೇಳಬಯಸುತ್ತೇನೆ.

**ಬಹು ದೊಡ್ಡ ಶೋಧಗಳು !**

ಹಲವು ಸಭೆಗಳಲ್ಲಿ ನನ್ನನ್ನು ಸಂಶೋಧಕನೆಂದು ಪರಿಚಯ ಮಾಡಿಕೊಡುವುದುಂಟು : ಅಲ್ಲಿ ಸಂಪ್ರದಾಯದಂತೆ ಕೆಲವು ಉತ್ಪ್ರೇಕ್ಷೆಯ ಮಾತುಗಳೂ

ಬಂದಿರುತ್ತವೆ. ತಡವಾಗಿ ಆರಂಭವಾದ ಕೆಲವು ಸಭೆಗಳಲ್ಲಿ ಈಚಿನ ನನ್ನ ಬಹು ದೊಡ್ಡ ಶೋಧವೊಂದನ್ನು ತಿಳಿಸುತ್ತಿದ್ದೇನೆ ಎಂದಾಗ ಸಭಿಕರ ಕುತೂಹಲ ಕೆರಳುತ್ತದೆ.-

"ಈ ಶೋಧ ನಿಮಗೆ ಗೊತ್ತಿರುವುದೇ ಹೌದು, ಗೊತ್ತಿಲ್ಲದಿರುವುದೂ ಹೌದು. ಅಂಗಡಿಗಳಲ್ಲಿ ಕೋಟಿಗಟ್ಟಲೆ ಬೆಲೆ ಬಾಳುವ ಗಡಿಯಾರ ದೊರಕಬಹುದು : ಆದರೆ ಎಷ್ಟು ಕೋಟಿ ಹಣ ಕೊಟ್ಟರೂ ಯಾವುದೇ ಅಂಗಡಿಯಲ್ಲಿ ಒಂದು ನಿಮಿಷವೂ ದೊರಕದು." ಇದನ್ನು ಕೇಳಿದಾಗ ಶ್ರೋತೃಗಳ ಮುಖದಲ್ಲಿ ನಗುವಿನ ಎಳೆ ಕಾಣಿಸಿಕೊಂಡು ಹಾಗೇ ಮಾಯವಾಗುತ್ತದೆ : ಆ ಮಾತು ಅವರ ಮನಸ್ಸಿನ ಆಳಕ್ಕೆ ಇಳಿದುದು ಕಾಣುತ್ತದೆ : ಅದು ಮುಂದೆ ಅವರ ನಡೆಯಲ್ಲಿ ಕಾಣಿಸುವುದೇ, ಯಾರು ಹೇಳಬೇಕು ?

ಹಿಂದೊಮ್ಮೆ ಸೂಚಿಸಿರುವಂತೆ, ಒಂದು ವಿಷಯದ ಬಗ್ಗೆ ಬಹು ಹೊತ್ತು ಆಕರ್ಷಕವಾಗಿ ಮಾತನಾಡಲು ಅಥವಾ ಬರೆಯಲು ವ್ಯಕ್ತಿ ಗಳಿಸಬೇಕಾದ ಅರ್ಹತೆಯೆಂದರೆ, ಅವನು ಅದರ ಬಗ್ಗೆ ಆದಷ್ಟು ಕಡಿಮೆ ತಿಳಿದಿರುವುದು! ಭಾಷೆ ನಮ್ಮ ಒಳಗನ್ನು ವ್ಯಕ್ತಪಡಿಸುವ ಸಾಧನದಂತೆಯೇ ಅದನ್ನು ಮುಚ್ಚಿಡುವ, ಇರುವ ವಾಸ್ತವವನ್ನು ಮುಚ್ಚಿ ನಮ್ಮನ್ನು ವೈಭವೀಕರಿಸಿಕೊಳ್ಳುವ ಸಾಧನವೂ ಹೌದು. ಇಂದು 'ಸತ್ಯವಂತ' ಯಾರು? ಸತ್ಯದ ಬಗ್ಗೆ ಆಕರ್ಷಕವಾಗಿ ಮಾತನಾಡುವವನು, ಬರೆಯುವವನು ತಾನೇ! ಸುಳ್ಳು ಹೇಳುವುದು ಅಥವಾ ಸುಳ್ಳನ್ನು ವ್ಯಕ್ತಪಡಿಸಲು ಪ್ರಾಣಿಗಳಿಗೆ ತಿಳಿಯದು. ಆ ಶಕ್ತಿ ಇರುವುದು ನರಮಾನವನಿಗೆ ಮಾತ್ರ!

'ಸತ್ಯ' ಶೋಧಕರಾದ ಸಂಶೋಧಕರು (ಅಂತೆಯೇ ನಾನು ಸೇರಿದಂತೆ ಎಲ್ಲರೂ) ಅಂತರ್ಗತಗೊಳಿಸಿಕೊಳ್ಳಬೇಕಾದ ಒಂದು ವಾಸ್ತವ ಅದು.

**ಕೊನೆಯ ಗುಟುಕು**

ಕನ್ನಡ ವಿಶ್ವವಿದ್ಯಾಲಯ ಪ್ರಕಟಿಸಿರುವ ನನ್ನ ಸಂಪ್ರಬಂಧ ಸಂಪುಟ "ಹೊಸತು ಹೊಸತು" ಕೃತಿಗೆ ಕೇಂದ್ರ ಸಾಹಿತ್ಯ ಅಕಾದೆಮಿ ಪ್ರಶಸ್ತಿ ಬಂದುದು ಕೇವಲ ಆಕಸ್ಮಿಕವೆಂದು ನಾನು ಭಾವಿಸಿಲ್ಲ. ಐರೋಪ್ಯ ತತ್ವಜ್ಞಾನಿ ಷೊಪೆನ್‌ಹೌರ್ ಉಪನಿಷತ್ತುಗಳ ಬಗ್ಗೆ ಹೀಗೆ ಬರೆಯುತ್ತಾನೆ - "The study of the Upanishads has been the solace of my life; it will be the solace of my death." ಉಪನಿಷತ್ತುಗಳ ಅಧ್ಯಯನ ಎಂಬ ಭಾಗದಲ್ಲಿ 'ಹಂಪಿ' ಎಂಬುದನ್ನು ಅಳವಡಿಸಿದರೆ ಮೇಲಿನ ವಾಕ್ಯ ನನ್ನ ಭಾವನೆಯನ್ನು ಬಿಂಬಿಸೀತು. ಅಂತಹ ಹಂಪಿಯ ಕನ್ನಡ ವಿಶ್ವವಿದ್ಯಾಲಯ ಈ ಪುಸ್ತಿಕೆಯನ್ನು ಹೊರತರುತ್ತಿರುವುದು ನನಗೆ ಸಂತೋಷವಲ್ಲದೆ ಮತ್ತೇನು !



# XIV. ಅನುಬಂಧ
## (ಪಾಂಡಿತ್ಯರಸದ ಇನ್ನೂ ಕೆಲವು ಹನಿಗಳು)

### ೧. "ಗಜನಾಣ್ಯ ಪಟ್ಟಸಾಲೆ"ವರ್ಗ

ಬೆಂಗಳೂರು ಜಿಲ್ಲೆ ಬೇಗೂರು ಹೋಬಳಿಯ ಬಸಾಪುರ ಗ್ರಾಮದಲ್ಲಿ "ಗಜನಾಣ್ಯ ಪಟ್ಟಸಾಲೆ ಸಂಘ" ಇರುವುದು ಪತ್ರಿಕೆಗಳಲ್ಲಿ ವರದಿಯಾಗಿದೆ. "ಪಟ್ಟಸಾಲಿ" ಎಂದರೆ ರೇಷ್ಮೆ ವಸ್ತ್ರ. "ಗಜನಾಣ್ಯ ಪಟ್ಟಸಾಲೆ" ಜಾತಿಯು ಯಾರನ್ನು ಸೂಚಿಸುತ್ತದೆ, ಅವರ ವೈಶಿಷ್ಟ್ಯವೇನು ಈ ಬಗ್ಗೆ ಮಾಹಿತಿ ಸಂಗ್ರಹಿಸುವ ಅಗತ್ಯವಿದೆ. ಒಂದು ವರದಿ ಪ್ರಕಾರ, ಬೆಂಗಳೂರು ಸಮೀಪದ ಸುದ್ದಗುಂಟೇ ಪಾಳ್ಯದಲ್ಲಿ ಗಜನಾಣ್ಯ ಪಟ್ಟಸಾಲೆ ಸಂಘದ ಸರ್ವ ಸದಸ್ಯರ ಸಭೆಯಲ್ಲಿ ಗುಳೇದಗುಡ್ಡದ (ಉತ್ತರ ಕರ್ನಾಟಕ) ಶ್ರೀ ಗುರುಸಿದ್ದೇಶ್ವರ ಮಠದ ಬಸವರಾಜ ಪಟ್ಟದಾರ್ಯ ಸ್ವಾಮೀಜಿ, ಅಖಿಲಭಾರತ ಪಟ್ಟುಸಾಲೆ ಅಧ್ಯಕ್ಷರು, ಕರ್ನಾಟಕ ನೇಕಾರರ ಪಟ್ಟುಸಾಲೆ ಸಂಘದ ಅಧ್ಯಕ್ಷರಾದಿಯಾಗಿ ಹಲವರು ಹಾಜರಿದ್ದರು. "ಪಟ್ಟ(ಟ್ಟು)ಸಾಲೆ ಸಂಘ"ವು ನೇಕಾರರದು ಎಂಬಲ್ಲಿ ಅನುಮಾನವಿಲ್ಲ. "ಗಜನಾಣ್ಯ" ಎಂದರೇನೋ ತಿಳಿಯದು.

### ೨. "ಮೂಗನ ಗೌಡ" ಎಂದರೇನು?; "ದ್ಯಾಮವ್ವ" - ಯಾರು?

ಈ ಹೆಸರಿನ ವ್ಯಕ್ತಿಗಳು ಹಲವರಿದ್ದಾರೆ. ಮೂಗಣ್ಣ, ಮೊಗಣ್ಣ, ಮೂಗಣ್ಣನ ಗೌಡ, ಮೊಗಮ್ಮ , ಮೊಗಪ್ಪಗೌಡ ಎಂಬ ಹೆಸರುಗಳೂ ಇವೆ. ಅವುಗಳ ಪೂರ್ವಾರ್ಧ "ಮೂಗ" ಕ್ಕೂ "ಮೂಕ (ಗ)" (ಮಾತು ಬಾರದವನು) ಪದಕ್ಕೂ ಯಾವುದೇ ಸಂಬಂಧವೂ ಕಾಣಿಸದು. "ಮುಕ್ಕಣ್ಣ" (ತ್ರಿನೇತ್ರ, ಶಿವ) ಎಂಬುದೇ ಮೂಗಣ್ಣ, ಮೂಗನ ಎಂದಾಗಿರುವ ಸಾಧ್ಯತೆಗಳು ಹೆಚ್ಚು. "ಮೂಗಣ್ಣ" ಎಂಬುದರ ಉತ್ತರಾರ್ಧ "-ಅಣ್ಣ" ಎಂದು ಭಾವಿಸಿದ ಕೆಲವರು "ಮೂಗ"ಕ್ಕೆ -ಅಪ್ಪ, -ಅಮ್ಮ ಸೇರಿಸಿ ಗಂಡು ಹೆಣ್ಣುಗಳಿಗೆ ಹೆಸರಿಟ್ಟಿರುವ ಸಾಧ್ಯತೆ ಇದೆ.

ಬೆಳಗಾವಿಯ ಕೋಟೆಯಲ್ಲಿರುವ ದ್ಯಾಮವ್ವ ಆ ಊರಿನ ಗ್ರಾಮದೇವತೆ. ಅವಳ ಗುಡಿಯನ್ನು ಹದಿನೈದನೇ ಶತಮಾನದಲ್ಲಿ ನಾಶಮಾಡಿದರೂ, ಅವಳ ಉತ್ಸವವನ್ನು ಅಲ್ಲಿನ ಜನ ಹನ್ನೆರಡು ವರ್ಷಗಳಿಗೊಮ್ಮೆ ಪ್ರಾಣಿಬಲಿಯೊಂದಿಗೆ ಆಚರಿಸುತ್ತಾರೆ.

ದುರ್ಗವ್ವನು ಪಾರ್ವತಿ (ಕಾಳಿ); ಆದರೆ ದ್ಯಾಮವ್ವನು ಲಕ್ಷ್ಮಿ. ಒಬ್ಬಳು ಕೆಂಪುಬಣ್ಣದವಳು, ಇನ್ನೊಬ್ಬಳು ಹಸಿರು ಬಣ್ಣದವಳು. ಉತ್ತರ ಕರ್ನಾಟಕ ಮತ್ತು ದಕ್ಷಿಣ ಮಹಾರಾಷ್ಟ್ರದಲ್ಲಿ ಅವರಿಬ್ಬರನ್ನೂ ಎಷ್ಟೋ ಕಡೆ ಒಂದೇ ಗರ್ಭಗುಡಿಯಲ್ಲಿ ಕಾಣಬಹುದು; ಪೂಜಾರಿ ಬಡಗಿಜಾತಿಯವನು.

ದ್ಯಾಮವ್ವ, ದ್ಯಾಮಪ್ಪ, ದ್ಯಾಮಯ್ಯ, ದ್ಯಾಮಣ್ಣ ಎಂಬ ವ್ಯಕ್ತಿನಾಮದವರಿದ್ದಾರೆ. "ದ್ಯಾಮ" ಎಂಬುದು "ದೇವ" ಎಂಬುದರ ಅಪಭ್ರಂಶ. ಪದಾದಿಯ "ಏ"ಸ್ವರವು "ಯಾ" ಎಂದಾಗುವುದು ಮಧ್ಯ, ಉತ್ತರ ಕರ್ನಾಟಕ ಆಡುನುಡಿಯಲ್ಲಿ ಸ್ವಾಭಾವಿಕ: ಕೇಕೆ-ಕ್ಯಾಕೆ, ಬೇರೆ-ಬ್ಯಾರೆ, ಏಕೆ-ಯಾಕೆ. ಹಾಗೆಯೇ, "ಮ", "ವ"ಗಳಲ್ಲಿನ ವ್ಯಂಜನಗಳಲ್ಲಿ ಪರಸ್ಪರ ವಿನಿಮಯ ಉಂಟು. ನೋಡಿ; ಕಾಮ-ಕಾವ, ಬೆಮರ್-ಬೆವರು, ತಾಮರೆ-ತಾವರೆ, ಕಾವಂಚಿ-ಕಾಮಂಚಿ (ಕಾಚಿ ಹುಲ್ಲು). ದ್ಯಾಮವ್ವ, ದ್ಯಾಮಣ್ಣ ವ್ಯಕ್ತಿನಾಮಗಳ ಹಾಗೆಯೇ ದೇವದಿಂದ ಉತ್ಪನ್ನವಾದ ದ್ಯಾವಮ್ಮ ದ್ಯಾವಯ್ಯ, ದ್ಯಾವೇಗೌಡ, ದ್ಯಾವಶೆಟ್ಟಿಯಂತಹ ವ್ಯಕ್ತಿನಾಮಗಳೂ ಉಂಟು. ದೇವ-ದೇಮ; ದ್ಯಾವ-ದ್ಯಾಮ.

ದಾವಣಗೆರೆ ಶಿವಮೊಗ್ಗ ಪ್ರದೇಶದ ಹಳ್ಳಿಗಳಲ್ಲಿ ಕಲ್ಲಪ್ಪ ಇಂತಹ ವಂಶನಾಮಗಳುಂಟು. ದ್ಯಾಮಪ್ಪಗಳ, ಕಲ್ಲಪ್ಪಗಳ ಎಂಬ ಪದಗಳ ರೂಪಾಂತರ ಅವು. ದ್ಯಾಮಪ್ಪ, ಕಲ್ಲಪ್ಪ ಇವರು ಆ ವಂಶಗಳ ಮೂಲಪುರುಷರು. '-ಗಳ' ಎಂಬುದರಲ್ಲಿ ಗಕಾರ ಲೋಪವಾಗಿ '-ಳ' ಎಂದು ಉಳಿದುಕೊಂಡಿದೆ. ಬಳ್ಳಾರಿ ಜಿಲ್ಲೆಯಲ್ಲಿ "ದಾನಪ್ಪಗಳ" ಎಂಬ ವ್ಯಕ್ತಿನಾಮ ದೊರಕುತ್ತದೆ. ಅಲ್ಲಿನ ಪದಮಧ್ಯದ -ಗ- ಸ್ಪಷ್ಟವಾಗಿದೆ. ನನ್ನ ಹಳ್ಳಿಯಲ್ಲಿ ಕಲ್ಲಪ್ಪ ಬಸಪ್ಪ ಎಂಬಂತಹ ವಂಶನಾಮದ ಹೆಸರಿನ ವ್ಯಕ್ತಿಗಳಿದ್ದಾರೆ. ಉತ್ತರ ಕರ್ನಾಟಕದಲ್ಲಿ '-ಗಳ' ಎಂಬ ಪ್ರತ್ಯಯದ ಬದಲು '-ಅವರ' ಎಂಬ ವಂಶ ನಾಮ ಸೂಚಕವೂ ಉಂಟು: ಉದಾಹರಣೆಗೆ ಕಾಳಪ್ಪನವರ ಶಿವಪ್ಪ; ಕಾಶಪ್ಪನವರ ರುದ್ರಪ್ಪ. ವಂಶನಾಮವನ್ನೇ ಮುಖ್ಯವಾಗಿಟ್ಟುಕೊಂಡು ಬಾಲ್ಯದಲ್ಲಿ ಇಟ್ಟ ಹೆಸರನ್ನು ಇನಿಷಿಯಲ್ಸ್ ಆಗಿ ಬಳಸುವ ಪದ್ಧತಿ ಉತ್ತರ ಕರ್ನಾಟಕದಲ್ಲಿದೆ. ಉದಾಹರಣೆಗೆ, ಎಸ್. ಕಾಡಪ್ಪನವರ್, ಆರ್. ಕಾಶಪ್ಪನವರ್ ಇತ್ಯಾದಿ.-ಗಳ ಎಂಬುದು ಗೌರವ ಸೂಚಕ ಬಹುವಚನ ಪ್ರತ್ಯಯ.

ಬಳ್ಳಾರಿ ಜಿಲ್ಲೆಯ ಹಳ್ಳಿಯೊಂದರಲ್ಲಿ ಅತ್ಯಂತ ಜನಪ್ರಿಯವಾಗಿರುವ ಮಾಯಮ್ಮನ ಗುಡಿಯಲ್ಲಿನ ಮೂಲಮೂರ್ತಿಯ ಅಕ್ಕ ಪಕ್ಕದ ದೇವತೆಗಳನ್ನು ದೊಡ್ಡ ಮಾಯಮ್ಮ, ಚಿಕ್ಕ ಮಾಯಮ್ಮ ಎಂದು ಕರೆಯುತ್ತಾರೆ. ಅವರಿಬ್ಬರೂ ತಾಯಿ ಮಾಯಮ್ಮನ ಮಕ್ಕಳು, ಅಕ್ಕ ತಂಗಿಯರು. ಉತ್ಸವದ ದಿನ ಚಿಕ್ಕ ಮಾಯಮ್ಮನಿಗೆ

(ತಂಗಿಗೆ) ಅಲಂಕಾರ ಮಾಡಿದ ಮೇಲೆಯೇ ದೊಡ್ಡ ಮಾಯಮ್ಮನಿಗೆ ಅಲಂಕಾರ ಮಾಡಬೇಕು; ಬಳಿಕ ತಾಯಿ ಮಾಯಮ್ಮನಿಗೆ. ಈ ಕ್ರಮವೇನಾದರೂ ತಪ್ಪಿ, ಚಿಕ್ಕ ಮಾಯಮ್ಮನಿಗೆ ಮೊದಲು ಅಲಂಕಾರ ಮಾಡದಿದ್ದರೆ ಅವಳ ಮೇಲೆ ಹಾಕಿದ ಒಡವೆಗಳೆಲ್ಲ ಚಲ್ಲಾಪಿಲ್ಲಿಯಾಗಿ ಉದುರುತ್ತವೆ- ಅವಳು ಕೋಪದಿಂದ ಅವುಗಳನ್ನು ಕಿತ್ತೆಸೆಯುತ್ತಾಳೆ. ಈ ಬಗೆಯ ಶ್ರದ್ಧೆಗಳು ಇನ್ನೂ ಜೀವಂತವಾಗಿವೆ, ಜೀವಂತವಾಗಿರುತ್ತವೆ. ಭಾರತದ ಶಿಷ್ಟ ದೈವಗಳಿಗಿಂತ ಜಾನಪದ ದೈವಗಳ ಸಂಖ್ಯೆ, ಶ್ರದ್ಧೆ ನಂಬಿಕೆ ಉತ್ಸವ ಪೂಜಾವಿಧಾನ ಇವುಗಳ ವೈವಿಧ್ಯ ಅಪಾರ, ವಿಸ್ಮಯಕರ. ಬೆಂಗಳೂರು ನಗರ ಎಷ್ಟೇ ಬೆಳೆದರೂ ಅದರ ಆರಾಧ್ಯ ದೇವತೆ, 'ಗ್ರಾಮ ದೇವತೆ' ಅಣ್ಣಮ್ಮ ತನ್ನ ಸ್ಥಾನವನ್ನು ಎಂದೂ ಬಿಟ್ಟುಕೊಡುವುದಿಲ್ಲ.

### ೩. ಹಿಂದೂ ಧರ್ಮ - ವೈಶಿಷ್ಟ್ಯ

ಇದು ಹಿಂದೂ ಧರ್ಮದ ಲಕ್ಷಣಕ್ಕೆ ಸಂಬಂಧಿಸಿದ್ದು; ಬಹು ದಿನಗಳಿಂದ ನಾನು ಮತ್ತೆ ಮತ್ತೆ ಆಲೋಚಿಸುತ್ತಿರುವ ಒಂದು ಚಿಂತನೆಯ ಹೊಳಹು ಇಲ್ಲಿದೆ. ಕಳೆದ ಸಾವಿರ ವರ್ಷಗಳಿಂದ ತನ್ನ ಮೇಲೆ ನಡೆದಿರುವ ಭೀಕರ ಆಕ್ರಮಣಗಳನ್ನು ನುಂಗಿಕೊಂಡು ಹಿಂದೂ ಧರ್ಮ ಉಳಿದಿರಲು ಕಾರಣ ವೃತ್ತಿ (ಜಾತಿ) ವೈವಿಧ್ಯ ಮಾತ್ರವಲ್ಲ, ಅದಕ್ಕಿಂತ ಮುಖ್ಯವಾಗಿ ಭಾರತದಲ್ಲಿರುವ ದೈವೀ ವೈವಿಧ್ಯ. ಆಗಲೇ ಸೂಚಿಸಿದಂತೆ ಆ ವೈವಿಧ್ಯ ಶಿಷ್ಟದೇವತೆಗಳಲ್ಲಿ ಮಾತ್ರವಲ್ಲ, ಜಾನಪದ ದೇವತೆಗಳಲ್ಲೂ ಇರುವಂತಹದು. "ಏಕಂ ಸತ್ ವಿಪ್ರಾ ಬಹುಧಾ ವದಂತಿ" ಎಂಬ ಸಂಸ್ಕೃತೋಕ್ತಿ (ಇರುವುದು ಒಂದೇ ಚೈತನ್ಯಶಕ್ತಿ ಅಥವಾ ಇರುವ ದೇವರು ಒಬ್ಬನೇ - ಆ ಶಕ್ತಿಗೆ ಅಥವಾ ದೇವರಿಗೆ ಇರುವ ಹೆಸರುಗಳು ಮಾತ್ರ ಭಿನ್ನ) ನಮ್ಮ ಹಳ್ಳಿಯ ಜನಕ್ಕೆ ತಿಳಿದಿಲ್ಲ. ಆದರೆ ಅವರೆಲ್ಲ ಕಾಳಮ್ಮ, ದುರುಗವ್ವ, ಪ್ಲೇಗಮ್ಮ, ಮಾರ‍್ಯವ್ವ, ಅಂಪವ್ವ (ಪಂಪಾಂಬಿಕೆ), ಈರಬದ್ರ, ಶಿವ, ತಿಮ್ಮಪ್ಪ (ವೆಂಕಟೇಶ್ವರ), ಹನುಮಂತ, ರಾಮ, ಚೌಡಿ, ದ್ಯಾಮವ್ವ, ಬನ್ನಿ ಮಾಂಕಾಳಿ, ಮಂಚಾಲಮ್ಮ (ಮಂತ್ರಾಲಯದ ಗ್ರಾಮದೇವತೆ; 'ಮಂಚಾಲೆ' ಎಂಬುದರ ಸಂಸ್ಕೃತೀಕರಣವೇ ಮಂತ್ರಾಲಯ), ಪಟಾಲಮ್ಮ, ಮದ್ದೂರಮ್ಮ, ಹಾಸನಾಂಬಾ, ಮೂಕಾಂಬಿಕೆ, ಕಾಶಿ ವಿಶ್ವನಾಥ ಇವೇ ಮೊದಲಾದ ದೈವಗಳೆಲ್ಲ ಒಂದೇ ದೈವದ ಭಿನ್ನ ರೂಪಗಳೆಂದೇ ಜನರು ನಂಬಿದ್ದಾರೆ. ಯಾವುದೋ ಒಂದು ದೈವ, ಆ ದೈವದ ಒಂದು ನಿರ್ದಿಷ್ಟ ಕೇಂದ್ರ- ಇವುಗಳೇ ಹಿಂದೂ ಧರ್ಮದ ಅಡಿಗಲ್ಲಾಗಿದ್ದರೆ ಆ ದೈವ, ಆ ದೈವದ ಮೂಲಸ್ಥಾನ ಇವುಗಳ ನಾಶವು ಹಿಂದೂ ಧರ್ಮದ ನಾಶವಾಗುತ್ತಿತ್ತು. ದೈವೀ ವೈವಿಧ್ಯ ಹಿಂದೂ ಧರ್ಮದ ಅತ್ಯುದಾರ ಮನೋಧರ್ಮಕ್ಕೆ ಭದ್ರತೆಗೆ ಕಾರಣವಾಗಿದೆ. ನನ್ನ ಹಳ್ಳಿಯ ಜನ ಕಲ್ಲೇಶ್ವರ ದೇವಾಲಯದ

'ಪರವ್ವ' (ಪರ್ವ-ಹಬ್ಬ) ಉತ್ಸವದಲ್ಲಿ ಹೇಗೋ ವೀರಭದ್ರನ ರಥೋತ್ಸವದಲ್ಲಿ, ಹಾಗೆಯೇ ಕೆಳವರ್ಗದ ಜನರ ಕರಿಯವ್ವನ ಜಾತ್ರೆ, 'ಸಿಡಿ'ಗಳಲ್ಲೂ ಸಮಾನ ಉತ್ಸಾಹದಿಂದ ಭಾಗವಹಿಸುತ್ತಿದ್ದರು.

ಈ ಬಗ್ಗೆ ಗಂಭೀರವಾದ ಚಿಂತನೆ ನಡೆಯಬೇಕಾಗಿದೆ. ನನಗೇನೋ ಯೋಚಿಸಿದಷ್ಟು ನನ್ನ ಚಿಂತನೆ ದೃಢಗೊಳ್ಳುತ್ತಿದೆ: ವೃತ್ತಿ ವೈವಿಧ್ಯ, ದೈವ ವೈವಿಧ್ಯಗಳು (ಗ್ರಾಮೀಣ ಮತ್ತು ನಗರ ದೈವಗಳು), ಜಾನಪದ ಮತ್ತು ಶಿಷ್ಟ ದೈವಗಳು, ದೇಶೀಯ ಮತ್ತು ರಾಷ್ಟ್ರೀಯ ದೈವಗಳು ಇವು ಹಿಂದೂ ಧರ್ಮದ ಜೀವಸತ್ವ; ಜೀವನಾಡಿ; ಭದ್ರಬೇರು. ಹಿಂದೂ ಧರ್ಮವು ಅನ್ಯ ಮತಗಳ ಬಿರುಗಾಳಿಯ ಹೊಡೆತದಿಂದ ತತ್ತರಿಸದೆ ಭದ್ರವಾಗಿ ಉಳಿದಿದ್ದರೆ ದೈವೀ ವೈವಿಧ್ಯವೂ ಕಾರಣ ಮಾತ್ರವಲ್ಲ, ಮುಖ್ಯ ಕಾರಣಗಳಲ್ಲಿ ಒಂದು. ಈ ಚಿಂತನೆ ನನಗೆ ತಿಳಿದಮಟ್ಟಿಗೆ ಹೊಸತು: ಅದನ್ನು ಹೇಳಿರುವವರಲ್ಲಿ ನಾನು ಮೊದಲಿಗನಲ್ಲವೆಂದು ಹೇಳಿಕೊಳ್ಳಲಾರೆ - ಆ ಚಿಂತನೆಯು ಹೊರಬರಲು ನನ್ನನ್ನು ಮೊದಲು ಆರಿಸಿಕೊಂಡಿದೆ. ನಾನು ಖಂಡಿತ ಶ್ರೇಣೀಕೃತ ಜಾತಿ ವ್ಯವಸ್ಥೆಯ ಪರ ಅಲ್ಲವೆಂಬುದನ್ನು ಹೇಳಬೇಕಾಗಿಲ್ಲ. ನನ್ನ ಮೇಲಿನ ಬಹು ಪ್ರಮುಖ ಚಿಂತನೆ ಬಗ್ಗೆ ಮುಂದೆ ವಿಸ್ತಾರವಾಗಿ ಬರೆಯಲಿದ್ದೇನೆ.

ಹಿಂದೂ ಧರ್ಮದ ದೈವಗಳ ಪರಿಕಲ್ಪನೆ ನಮಗೆ ಆಧುನಿಕ ಕಾಲದ ಪ್ರಜಾಪ್ರಭುತ್ವಾತ್ಮಕ ವ್ಯವಸ್ಥೆಯನ್ನು ಜ್ಞಾಪಕಕ್ಕೆ ತರುತ್ತದೆ. ಕ್ರಿಶ್ಚಿಯನ್, ಇಸ್ಲಾಂ ಧರ್ಮಗಳದ್ದು ಸರ್ವಾಧಿಕಾರದ್ದು; ಅಲ್ಲಿ ವ್ಯಕ್ತಿ ಸ್ವಾತಂತ್ರ್ಯಕ್ಕೆ ಅವಕಾಶ ತೀರ ಕಡಿಮೆ, ಅಥವಾ ಇಲ್ಲವೇ ಇಲ್ಲ. ಅದರಲ್ಲೂ ಇಸ್ಲಾಂನಲ್ಲಿ ಇಲ್ಲ. ಬೈಬಲ್, ಏಸು ಇವು ಕ್ರಿಶ್ಚಿಯನ್ನರ ಅಂತಿಮ ಸತ್ಯವೆಂಬುದು ತೀರ್ಮಾನವಾಗಿದೆ. ಕೊರಾನ್, ಮಹಮದ್, ಅಲ್ಲಾ ಇವೂ ಅಷ್ಟೇ ಇಸ್ಲಾಂನಲ್ಲಿ. ಭಾರತದಲ್ಲಿ ಬೇರೆ ಬೇರೆ ದೈವೀಶಕ್ತಿಗಳಿಗೆ ಬೇರೆ ಬೇರೆ ಕರ್ತವ್ಯಗಳು ನಿಗದಿಯಾಗಿವೆ. ಮಳೆ, ಬೆಳೆ, ಗಾಳಿ, ಬೆಳಕು, ಭೂಮಿ, ಹುಟ್ಟು, ರೋಗ, ಸಾವು ಇತ್ಯಾದಿಗಳನ್ನು ನೋಡಿಕೊಳ್ಳುವುದು ಬೇರೆ ಬೇರೆ ದೈವಗಳ ಕರ್ತವ್ಯ: ವಿಶ್ವದ ಹಿಂದಿನ ಅಗೋಚರ ಶಕ್ತಿ ಇವುಗಳ ಮೂಲಕ ಜಗತ್ತನ್ನು ನಡೆಯಿಸುತ್ತಿದೆ. ಮನುಷ್ಯನಿಗೆ ಯಾವುದನ್ನೇ ಪ್ರಶ್ನಿಸುವ ಹಕ್ಕು ಉಂಟು; ಆದರೆ ಶುಭ್ರ ಜೀವನದ ಜವಾಬ್ದಾರಿ ಆ ಹಕ್ಕಿನಷ್ಟೇ ಮುಖ್ಯವಾದುದು. ಈ ಬಗ್ಗೆ ಪ್ರಕಟವಾಗಿರುವ ನನ್ನ ಲೇಖನದ ಒಂದು ಭಾಗವನ್ನು ಇಲ್ಲಿ ಅದು ಇರುವಂತೆಯೇ ಉಲ್ಲೇಖಿಸುತ್ತೇನೆ. (ಅಪಾರ್ಥ, ಆಕ್ರಮಣಗಳಿಗೆ ಒಳಗಾಗಿರುವ ಹಿಂದೂ ಧರ್ಮ. ೨೦೦೮. ಪು. ೧೮೩-೪).

"ದತ್ತಾತ್ರೇಯನು ಬ್ರಹ್ಮ, ವಿಷ್ಣು, ಶಿವ ಇವರ ಮಿಲನದ ಸಂಕೇತ. ಆ ತ್ರಿಮೂರ್ತಿಗಳಲ್ಲಿ ಬ್ರಹ್ಮನು ಸೃಷ್ಟಿಕರ್ತ: ಅವನ ನಾಲ್ಕು ಮುಖಗಳು ಭೂಮಿ, ಪಾತಾಳ, ಸ್ವರ್ಗಗಳು ಅಂತೆಯೇ ಭೌತಿಕ ವಿಶ್ವದ ಆಚೆ ಇರುವ ಆಧ್ಯಾತ್ಮಿಕ ವಿಶ್ವ. ಅವನ ಪತ್ನಿ

ಸರಸ್ವತಿ ಅಥವಾ ಶಾರದೆ ಕೈಯಲ್ಲಿ ಹಿಡಿದಿರುವ ಪುಸ್ತಕ, ವೀಣೆಗಳು ಜ್ಞಾನ, ಕಲೆಗಳ ಸಂಕೇತ. ಸೃಷ್ಟಿಯ ಸಂರಕ್ಷಕ ವಿಷ್ಣುವಿನ ವಾಹನ ಗರುಡ: ಆಕಾಶದುದ್ದಕ್ಕೂ ಹಾರಿ ಲೋಕವನ್ನು ಪರಿವೀಕ್ಷಿಸುವ ಹಕ್ಕಿ. ಕಿರೀಟಧಾರಿ ವಿಷ್ಣು ಸದಾ ಸುಂದರ, ಮಂದಸ್ಮಿತ; ಧರ್ಮಾವಿರುದ್ಧದ ಭೋಗಿ; ಐಶ್ವರ್ಯದ ಲಕ್ಷ್ಮಿ ಅವನ ಪತ್ನಿ. ಜಗತ್ತನ್ನು ರಕ್ಷಿಸುವ ಅವನು ಲೋಕದ ಜನಗಳು ಹೇಗಿರಬೇಕೆಂಬುದರ ಒಂದು ಮಾದರಿ. ಜಗತ್ತಿನ ಆಗುಹೋಗುಗಳನ್ನು ಎಚ್ಚರದಿಂದ ಕಾಯುವ ಶಿವನು ಶ್ರಮಜೀವಿ - ಜಡೆ, ಗಡ್ಡ ಧರಿಸುವ ಶಿವನು ಮಂಗಳಪ್ರದನೂ ಹೌದು ('ಶಿವ' ಎಂದರೆ ಮಂಗಳ, ಶುಭ ಎಂದರ್ಥ); ಅವನು ದುಷ್ಟರಿಗೆ ರುದ್ರನೂ ಹೌದು. ಅವನ ಎರಡು ಕಣ್ಣುಗಳು ಕರುಣೆಯಿಂದ ತುಂಬಿರುತ್ತವೆ; ಮೂರನೆಯದು ಬೆಂಕಿಯ ಕಣ್ಣು. (ನೊಸಲಗಣ್ಣು ಸದಾ ಮುಚ್ಚಿರುತ್ತದೆ). ಆದರೆ ದೌಷ್ಟ್ಯವನ್ನು ಕಂಡಾಗ ಅದು ತೆರೆದು ಬೆಂಕಿಯನ್ನುಗುಳಿ ದುಷ್ಟ ಸಂಹಾರ ಮಾಡುತ್ತದೆ.

ವಿಷ್ಣುವು ಕ್ಷೀರಸಾಗರವನ್ನು ಶಯನವನ್ನಾಗಿ ಮಾಡಿಕೊಂಡವನು; ಹಾಲಿನ ಸಾಗರದ ಮೇಲೆ ವಿಷದ ಆದಿಶೇಷ ಉಂಟು: ಅದು ವಿಷ್ಣುವಿನ ಹಾಸುಗೆ. ಜೀವನದಲ್ಲಿ ಹಾಲು, ನಂಜು ಎರಡೂ ಉಂಟು ಎಂಬುದರ ಸಂಕೇತ. ಶಿವನ ವಾಸ ಶಿಖರದಲ್ಲಿ, ಹಿಮದ ಗಡ್ಡೆಯ ಬೆಟ್ಟದ ತುದಿಯಲ್ಲಿ. ಅವನು ಗೌರಿಯನ್ನು ವಿವಾಹವಾಗಿದ್ದರೂ ಭೂಮಿಗೆ ನೀರುಣಿಸುವ ಗಂಗೆಯನ್ನು ತಲೆಯಲ್ಲಿ ಹೊತ್ತವನು. ಭೂಮಿ ಉಳುವ ವೃಷಭ ಅವನ ವಾಹನ. ಶಿವನು ಧ್ಯಾನದ ಆಧ್ಯಾತ್ಮದ ಸಂಕೇತ. ಬ್ರಹ್ಮನು ಜ್ಞಾನಕ್ಕೆ, ವಿಷ್ಣುವು ಧಾರ್ಮಿಕ ಸುಖಮಯ ಜೀವನಕ್ಕೆ, ಶಿವನು ತ್ಯಾಗ, ತಪಸ್ಸು, ಆಧ್ಯಾತ್ಮಿಕ ಜೀವನಕ್ಕೆ, ಶ್ರಮಕ್ಕೆ ಸಂಕೇತ. ಇವು ಮೂರೂ ಅವಿಭಾಜ್ಯಗಳು. ಅಂತಿಮವಾಗಿ ಬ್ರಹ್ಮ, ವಿಷ್ಣು, ಶಿವ ಇವರು ಒಂದು ವಿಶ್ವ ಚೈತನ್ಯದ ಬೇರೆ ಬೇರೆ ಅಭಿವ್ಯಕ್ತಿಗಳು. ಇದು ನಾನು ತ್ರಿಮೂರ್ತಿಗಳ ಅರ್ಥವನ್ನು ಗ್ರಹಿಸಿರುವ ಬಗೆ. ('ನಾನು' ಎಂಬುದನ್ನು ಒತ್ತಿ ಹೇಳುತ್ತೇನೆ).

ಭಾರತೀಯ ಧರ್ಮದ ದೈವ ಪರಿಕಲ್ಪನೆ ಎಲ್ಲ ದೃಷ್ಟಿಗಳಿಂದ ಇಂದಿನ ಪರಿಭಾಷೆಯಲ್ಲಿ ಹೇಳುವುದಾದರೆ ಪ್ರಜಾಸತ್ತಾತ್ಮಕ. ಅನ್ಯಧರ್ಮಗಳ ವ್ಯವಸ್ಥೆ ಸರ್ವಾಧಿಕಾರದ್ದು. ನಿರ್ದಿಷ್ಟ ಹೆಸರಿನ ಒಂದು ದೈವ, ಒಬ್ಬ ಪ್ರವಾದಿ, ಒಂದು ಧರ್ಮ ಗ್ರಂಥ ಇವು ಮಾತ್ರ ಆ ಧರ್ಮಗಳಲ್ಲಿ ಮುಖ್ಯ. ಅವು ಮಾತ್ರ ಸತ್ಯ. ಉಳಿದುವೆಲ್ಲ ಮಿಥ್ಯ. ಭಾರತೀಯ ಧರ್ಮದಲ್ಲಿ ವಿಶ್ವವನ್ನು ನೋಡಿಕೊಳ್ಳುವ ಅಧಿಕಾರವು ವಿಕೇಂದ್ರಿತವಾಗಿದೆ. ಇಂದ್ರ, ಅಗ್ನಿ, ವರುಣ, ವಾಯು ಇತ್ಯಾದಿ ಶಕ್ತಿಗಳ ಕಲ್ಪನೆ, ಹಾಗೆಯೇ ತ್ರಿಮೂರ್ತಿಗಳ ಪರಿಕಲ್ಪನೆ ವಿಕೇಂದ್ರೀಕೃತ ವ್ಯವಸ್ಥೆಯಂತೆ ಕಾಣುತ್ತದೆ.

ಅನ್ಯ ಧರ್ಮಗಳದ್ದು ಕೇಂದ್ರೀಕೃತ ವ್ಯವಸ್ಥೆ, ಸರ್ವಾಧಿಕಾರಿ ವ್ಯವಸ್ಥೆ. ಬಹು ದೈವಾರಾಧನೆಯ ಬಗ್ಗೆ ಹಿಂದೂಗಳು ಏನೂ ಪಶ್ಚಾತ್ತಾಪಪಡಬೇಕಾಗಿಲ್ಲ. ಆದ್ದರಿಂದಲೇ ಭಾರತೀಯ ವ್ಯವಸ್ಥೆಯಲ್ಲಿ ಸಹನೆ, ಸೋದರತ್ವ, ಪ್ರೀತಿ ಇವು ವ್ಯಾಪಕವಾಗಿವೆ. ಸನಾತನ ಧರ್ಮ ಮುಖ್ಯವಾಗಿ ಶ್ರೇಷ್ಠ ಮೌಲ್ಯಾಧಾರಿತ- ಆದ್ದರಿಂದಲೇ ಅದು "ಏಕಂ ಸತ್ ವಿಪ್ರಾ ಬಹುಧಾ ವದಂತಿ", "ಸರ್ವೇ ಜನಾಃ ಸುಖಿನೋ ಭವಂತು" ಈ ಮಾತುಗಳನ್ನು ತಾರಕ ಮಂತ್ರವಾಗಿ ಸ್ವೀಕರಿಸಿದೆ.

ಹಿಂದೂ ಧರ್ಮದ ಮೂಲ ಆಧಾರ ಗ್ರಂಥಗಳಾದ ವೇದಗಳಲ್ಲೇ ಅದರ ಪ್ರಜಾಸತ್ತಾತ್ಮಕ ಸ್ವರೂಪದ ಲಕ್ಷಣಗಳಿವೆ. ವೇದಗಳು ಒಬ್ಬ ವ್ಯಕ್ತಿಯಿಂದ, ಒಂದು ನಿರ್ದಿಷ್ಟ ಕಾಲದಲ್ಲಿ ರಚಿತವಾದುವಲ್ಲ. ಬಹುಕಾಲದ ಹಲವು ವಿವೇಕಿ ಋಷಿಗಳ ತಪಸ್ಸಿನ ಚಿಂತನೆಯ ಫಲ. ಅವುಗಳ ಉಕ್ತಿಯೇ ಅಂತಿಮ ಸತ್ಯವೆಂದು ಯಾರೂ ಉಗ್ರವಾಗಿ ಪ್ರತಿಪಾದಿಸಿಲ್ಲ, ಪ್ರತಿಪಾದಿಸಲು ಸಾಧ್ಯವಿಲ್ಲ. ಅವುಗಳ ಪ್ರಕಾರ ಜ್ಞಾನ, ಆಡಳಿತ, ವ್ಯವಸಾಯ - ವ್ಯಾಪಾರ, ದೈಹಿಕ ಶ್ರಮ ಈ ಕ್ಷೇತ್ರಗಳನ್ನು ಆರಿಸಿಕೊಂಡವರೇ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರು: ಇವರು ಹುಟ್ಟಿನಿಂದ ಆದವರಲ್ಲ. ಬ್ರಾಹ್ಮಣನ ಮಗ ವ್ಯಾಪಾರ ಅಥವಾ ವ್ಯವಸಾಯ ಆರಿಸಿಕೊಂಡರೆ ವೈಶ್ಯನಾಗುತ್ತಿದ್ದ; ಶೂದ್ರನ ಮಗ ತನ್ನ ಆಸಕ್ತಿಯಿಂದ ಜ್ಞಾನದ ಕ್ಷೇತ್ರವನ್ನು ಆರಿಸಿಕೊಂಡರೆ ಬ್ರಾಹ್ಮಣ ಎನಿಸಿಕೊಳ್ಳುತ್ತಿದ್ದ ಇತ್ಯಾದಿ. ಮುಂದೆ ಆ ವರ್ಣಗಳು ಜನ್ಮಗತವಾದುದು ಹಿಂದೂ ಧರ್ಮದ ಇತಿಹಾಸದ ಒಂದು ದುರಂತ. ಅಸ್ಪೃಶ್ಯ - ಸ್ಪೃಶ್ಯ, ಹೆಣ್ಣು - ಗಂಡು ಎಂಬ ತರತಮ ಭೇದ ವೇದಗಳ ಕಾಲದಲ್ಲಿರಲಿಲ್ಲ: ಈ ಭೇದ ಬಂದದ್ದು ಮುಂದೆ. ಅವುಗಳನ್ನು ಹೋಗಲಾಡಿಸಲು ಹಿಂದೂ ಧರ್ಮ ಈಗ ದೃಢಸಂಕಲ್ಪ ಮಾಡಿದೆ. ಎಲ್ಲರ ತಾತ್ವಿಕ - ಸಾಮಾಜಿಕ ಸಮಾನತೆಯನ್ನು ವ್ಯಕ್ತಿ ಸ್ವಾತಂತ್ರ್ಯವನ್ನು ಮನುಷ್ಯನ ಅಂತಿಮ ಗುರಿಯಾದ ಆತ್ಮ ಸಾಕ್ಷಾತ್ಕಾರವನ್ನು ಪ್ರತಿಪಾದಿಸುವ ಹಿಂದೂ ಧರ್ಮಧ ಬೇರುಗಳು ಆಳವಾಗಿ ವೇದಗಳಲ್ಲಿ ಹುದುಗಿವೆ - ಆ ವೇದಗಳು ಇಂದ್ರ, ಅಗ್ನಿ, ವರುಣ, ಸೂರ್ಯ ಇತ್ಯಾದಿ ಪ್ರಾಕೃತಿಕ ದೈವಗಳ ಸ್ತೋತ್ರಮಾಡಿದ್ದರೂ ಅವೆಲ್ಲವೂ ಒಂದು ಚೈತನ್ಯದ ಬೇರೆ ಬೇರೆ ಆವಿಷ್ಕಾರಗಳು ಎಂದೇ ವೇದಗಳು ಭಾವಿಸಿವೆ. ಹಿಂದೂ ಧರ್ಮದ ಈ ವಿಶಿಷ್ಟ ಉದಾತ್ತ ಲಕ್ಷಣವು ಗಂಭೀರ ಪರಿಭಾವನೆಗೆ ಅನುಸರಣೆಗೆ ಅನುಷ್ಠಾನಕ್ಕೆ ಯೋಗ್ಯವಾದುದು.

ಹಿಂದೂ ಧರ್ಮ ಗ್ರಂಥಗಳೆಲ್ಲ ಇರುವುದು ಸಂಸ್ಕೃತದಲ್ಲಾದರೂ ಭಕ್ತಿ ಪಂಥದ ಶ್ರೇಷ್ಠರ ರಚನೆಗಳೆಲ್ಲ ಆಡುಭಾಷೆಗಳಲ್ಲಿ. ಕಬೀರನ ಒಂದು ಹಾಡಿನ ಎರಡು ಸಾಲುಗಳು ಹೀಗಿವೆ-

ಸಂಸ್ಕೃತ್ ಕೂಪ್ ಜಲ್ ।
ಭಾಷಾ ಬಹತಾ ನೀರ್ ॥

ಸಂಸ್ಕೃತವು ಬಾವಿಯ 'ಜಲ'; ಭಾಷಾ ಎಂದರೆ ಆಡು ಭಾಷೆಯು (ಹಿಂದಿ, ಕನ್ನಡ, ತಮಿಳು, ಬಂಗಾಳಿ ಇತ್ಯಾದಿ) ಹರಿಯುವ 'ನೀರು'. "ಕೂಪ ಜಲ" ಅಪ್ಪಟ ಸಂಸ್ಕೃತ; "ಬಹತಾ ನೀರ್" ಎಂಬಲ್ಲಿನ "ಬಹತಾ" ಎಂಬುದು, ಸಂಸ್ಕೃತದ "ವಹ್" to flow ಎಂಬುದಕ್ಕೆ ಸಂಬಂಧಿಸಿದ್ದು; 'ವಹತಿ'ಯ ತದ್ಭವ. "ನೀರ್" ಎಂಬುದು ದ್ರಾವಿಡ (ಕನ್ನಡ) ಪದವಾಗಿದ್ದು ಅದನ್ನು ಸಂಸ್ಕೃತವು ಸ್ವೀಕರಿಸಿದೆ (ನೀರಜ, ನೀರಜಾಕ್ಷಿ ಇ.) ಸಂಸ್ಕೃತ ನಿಂತ ನೀರು, "ಕೂಪ ಜಲ" ಎಂದರೆ ಕೆಲವರಿಗೆ ಮಾತ್ರ ಲಭ್ಯವಾಗುವ ಅದರಲ್ಲೂ ಕಷ್ಟದಿಂದ ಲಭ್ಯವಾಗುವ ನೀರು. ಹರಿಯುವ ಹೊಳೆ, ನದಿಗಳ ನೀರು ಎಲ್ಲರಿಗೂ ಎಲ್ಲ ಕೆಲಸಗಳಿಗೂ ಸುಲಭವಾಗಿ ಲಭ್ಯ. ಕಬೀರನ ಮೇಲಿನ ಮಾತುಗಳಿಗ ಹೆಚ್ಚು ವ್ಯಾಖ್ಯಾನ ಸಾಧ್ಯ. ಅವು ಬಹು ಸುಂದರ, ಸಂಕ್ಷಿಪ್ತ, ಅಂತೆಯೇ ಧ್ವನಿಪೂರ್ಣ, ಅರ್ಥಪೂರ್ಣ. ನನಗಂತೂ ಸಂತ ಕಬೀರನ ಈ ಮಾತುಗಳು ಬಹು ಸಂತೋಷವನ್ನು ನೀಡಿವೆ.

**೪. "ಪರೇವು", "ಬಾಯ್‌ಪರು"; "ಸಿಳೀಂದ್ರ" ; "ಬಾಲ ಕಂದ ಬೇಟ್"**

ನನ್ನ ಹಳ್ಳಿ ಚನ್ನಗಿರಿ ತಾಲೂಕು ಹಿರೇಕೋಗಲೂರಿನಲ್ಲಿ ಕಲ್ಲೇಶ್ವರ ದೇವರಿಗೆ (ಈ ದೇವಾಲಯ ಕನಿಷ್ಠ ಎಂಟುನೂರು ವರ್ಷಗಳಷ್ಟು ಹಳೆಯದು) ಹಲವು ವರ್ಷಕ್ಕೊಮ್ಮೆ "ಪರೇವು" (ಪರ) ಮಾಡುತ್ತಾರೆ- ಆ ದಿನ ದೇವಸ್ಥಾನದ ಪೌಳಿಯಲ್ಲಿ ದೇವಾಲಯದ ಗರ್ಭಗುಡಿಯ ಶಿವಲಿಂಗಕ್ಕೆ ವಿಶೇಷ ಪೂಜೆ ನಡೆದ ಬಳಿಕ ನಡೆಯುವ ಸಾಮೂಹಿಕ ಭೋಜನಕ್ಕೆ "ಪರೇವು" ("ಪರವ್ವ") ಎನ್ನುತ್ತಾರೆ. ಈ "ಪರೇವು" ಸಂಸ್ಕೃತದ "ಪರ್ವ" ಪದದ ರೂಪಾಂತರ. ಪರ್ವ ಎಂದರೆ ಸೇರುವುದು, ಸಂಧಿಸುವುದು, ವಿಶೇಷ ಉತ್ಸವ ಇತ್ಯಾದಿ. ಪರ್ವ ಎಂಬುದರ ತದ್ಭವವೇ ಹಬ್ಬ : (ಪರ್ವ - ಪರ್ಬ - ಹಬ್ಬ) ಪದಾದಿಯ ಮೂಲ ಪಕಾರ ಸಹಜವಾಗಿಯೇ ಹಕಾರವಾಗಿದ್ದರೂ (ನೋಡಿ : ಪಲ್ಲಿ-ಹಲ್ಲಿ, ಪಾವು - ಹಾವು) "ಪರೇವು" ಪದದಲ್ಲಿ ಆ ಮೂಲ ಪಕಾರವು ಉಳಿದು ಬಂದಿದೆ. ಪರೇವು ವಿಶೇಷ ಸಾಂಪ್ರದಾಯಕ ಹಬ್ಬವಾದ್ದರಿಂದ ಅದರಲ್ಲಿ ಪಕಾರ ಬದಲಾವಣೆಯಾಗದೇ ಉಳಿದು ಬಂದಿರುವುದು ವಿಶೇಷ. "ಪರೇವು" ಒಂದು ರೀತಿಯಲ್ಲಿ ಇಡೀ ಊರಿನ ಹಬ್ಬವೆಂದು ಜನರು ಭಾವಿಸಿರುವುದರಿಂದ ಅದನ್ನು "ಊರೊಟ್ಟಿನ ಹಬ್ಬ" ಎನ್ನುತ್ತಾರೆ. ಪರೇವು ದಿನ ಊರಿನ ಜನ (ಲಿಂಗಾಯತರು) ಯಾರೂ ಹೇಳದಿದ್ದರೂ ಕೆಲವರು ಕೊಡಗಳಲ್ಲಿ ನೀರು ತಂದು ಇಡೀ ದೇವಾಲಯವನ್ನು ಮೇಲೆ ಕೆಳಗೆ ಒಳಗೆ ಹೊರಗೆ

ಶುಭ್ರಗೊಳಿಸುತ್ತಾರೆ (ಅದು ಸಂಪೂರ್ಣ ಶಿಲಾಮಯ ದೇಗುಲ); ಹಸುವಿನ ಸೆಗಣಿ ತಂದು ಗುಡಿ ಸುತ್ತ ಬಳಿಯುತ್ತಾರೆ; ಅಲ್ಲೇ ಒಲೆ ಹಚ್ಚಿ ಅಡುಗೆ ಮಾಡುತ್ತಾರೆ, ಪೂಜೆ ಮುಗಿದ ಬಳಿಕ ಊಟ ಮಾಡುತ್ತಾರೆ. ಊಟದಲ್ಲಿ "ಸೀಪ್ರು"ಗೆ (ಸಿಹಿ ಅಡುಗೆ) ಪ್ರಾಮುಖ್ಯ. ಆ ದಿನ ಬಹುತೇಕ ಮನೆಗಳಲ್ಲಿ ಅಡಿಗೆ ಮಾಡುವುದಿಲ್ಲ.

ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ ತಾಲೂಕಿನ ಕೆರೇನಹಳ್ಳಿಯಲ್ಲಿನ ಬಸವಣ್ಣ ದೇವಾಲಯದಲ್ಲಿಯೂ ಒಂದು ಬಗೆಯ 'ಪರು' ('ಪರುವು') ನಡೆಯುತ್ತದೆ. ಒಂದು ಕತೆಯ ಪ್ರಕಾರ ಹಿಂದೆ ಆ ಊರಿನ ಗೌಡರ ಏಳು ಎಮ್ಮೆಗಳು ಮೇಯಲು ಹೊರಗೆ ಹೋದವು ಹಿಂದಕ್ಕೆ ಬರಲಿಲ್ಲ. ಆಗ ಗೌಡ ಊರ ಬಸವಣ್ಣನಿಗೆ ಬರೀ ಬಾಯಿ ಮಾತಲ್ಲೇ ಪೂಜೆ ಮಂಗಳಾರತಿ ಮಾಡಿ ಊರಲ್ಲಿ ಉತ್ಸವ ಮಾಡಿಸಿದ; ಬರೀ ಮಾತಿನಲ್ಲಿ ಊರಿನ ಜನಕ್ಕೆಲ್ಲ ಅಡುಗೆ ಮಾಡಿಸಿ ಹಾಕಿದ - ಅದು ಯಾವುದೂ ವಾಸ್ತವವಾಗಿ ನಡೆಯಲಿಲ್ಲ; ಅವೆಲ್ಲ ಬರೀ ಬಾಯಿ ಮಾತಿನಲ್ಲಿತ್ತು. ಮಾರನೆಯ ದಿನ ಅವನ ಹೆಂಡತಿ ಬೆಳಿಗ್ಗೆ ಮನೆ ಬಾಗಿಲು ತೆಗೆದಾಗ ಆ ಏಳು ಎಮ್ಮೆಗಳೂ ಅವನ ಬಾಗಿಲಲ್ಲಿ ನಿಂತಿದ್ದುವು. ಆ ಗೌಡ ಬರೀ ಬಾಯ್ಮಾತಿನಲ್ಲೇ ಎಲ್ಲ ಮಾಡಿದ್ದರೂ (ಮಾಡುತ್ತೇನೆ ಎಂದು ಮಾತು ಕೊಟ್ಟಿರಲಿಲ್ಲ, ಬಾಯ್ಮಾತಿನಲ್ಲಿ ಮಾಡಿ ಮುಗಿಸಿದ್ದ) ಅವನ ಶ್ರದ್ಧೆಗೆ ಮೆಚ್ಚಿದ ಬಸವಣ್ಣ ಏಳು ಎಮ್ಮೆಗಳನ್ನೂ ಅವನಿಗೆ ಕರುಣಿಸಿದ. ಅದೇ 'ಬಾಯ್ ಪರು (ವು)'. ಅದರ ಸ್ಮಾರಕವಾಗಿ ಆ ಊರಲ್ಲಿ ವರ್ಷಕ್ಕೊಮ್ಮೆ ಯುಗಾದಿ ಮಾರನೆಯ ದಿನ ಬಾಯ್ ಪರುವು ಆಚರಿಸುತ್ತಾರೆ. ಆ ದಿನ ಊರಿನ ಜನ ಎಲ್ಲ ಸೇರಿ ದೇವಾಲಯ ಶುಭ್ರಗೊಳಿಸಿ ಪೂಜೆ ಉತ್ಸವಾದಿಗಳನ್ನು ಮಾಡಿ ಜನರಿಗೆ ಊಟ ಹಾಕಿಸುತ್ತಾರೆ. ಇದು ಬರೀ ಬಾಯಿ ಮಾತಿನದಲ್ಲ, ವಾಸ್ತವವಾಗಿ ನಡೆಯುತ್ತಿರುವುದು. (ಈ ಸ್ವಾರಸ್ಯಕರ ಮಾಹಿತಿ ನೀಡಿದವರು ಮಿತ್ರ ಡಾ. ಎಚ್. ಎಂ. ಮರುಳಸಿದ್ಧಯ್ಯನವರ ಪತ್ನಿ ಶ್ರೀಮತಿ ಶಾಂತವೀರಮ್ಮನವರು).

ಹಿಂದೆ ಹಳ್ಳಿಯ ಜನ ಊರಿಂದ ಊರಿಗೆ ತಲೆಮೇಲೆ ಹೊರೆ ಹೊತ್ತುಕೊಂಡು ಹೋಗುತ್ತಿದ್ದರು: ಅಥವಾ ಅವರು ಹೊಲಗಳಿಂದ ಭಾರದ ಚೀಲ ಹೊತ್ತೋ ಕಟ್ಟಿಗೆ ಹೊತ್ತುಕೊಂಡೋ ಬರುತ್ತಿದ್ದರು. ಅಂತಹ ಜನರ ಅನುಕೂಲಕ್ಕಾಗಿ ದಾರಿಯ ಪಕ್ಕದಲ್ಲಿ "ಹೊರೆ ಗಲ್ಲು" ಸ್ಥಾಪಿಸುತ್ತಿದ್ದರು: ಸುಮಾರು ಐದಡಿ ಎತ್ತರದ ಎರಡು ಕಲ್ಲುಗಳ ಮೇಲೆ ಅಗಲದ ಕಲ್ಲನ್ನು ಕೂರಿಸುತ್ತಿದ್ದರು - ಜನರು ಹೊರೆಗಳನ್ನೋ ಕಟ್ಟಿಗೆಗಳ ಕಟ್ಟನ್ನೋ ಅದರ ಮೇಲೆ ಬೇರೆಯವರ ಸಹಾಯವಿಲ್ಲದೆ ಇಳಿಸಿ, ವಿಶ್ರಮಿಸಿ, ಬೇರೆಯವರ ಸಹಾಯವಿಲ್ಲದೆ ತಾವೇ ತೆಗೆದುಕೊಂಡು ತಲೆಮೇಲೆ ಹೊತ್ತು ಸಾಗುತ್ತಿದ್ದರು.

ಅಂತಹ ಹೊರೆಗಲ್ಲು ಪಕ್ಕದಲ್ಲಿ ನಾಲ್ಕು ಕಲ್ಲಿನ ಕಂಬಗಳನ್ನು ನಿಲ್ಲಿಸಿ ಅವುಗಳ ಮೇಲೆ ತೆರೆದ ಬಾಯಿಯ ಕಲ್ಲಿನ ಚೌಕಾಕಾರದ ನೀರಿನ ತೊಟ್ಟಿ ಇಟ್ಟು ಅದಕ್ಕೆ ನೀರು ಸುರಿಯುತ್ತಿದ್ದರು. ಬಾಯಾರಿದವರು ಆ ನೀರು ಕುಡಿದು ಮುಂದೆ ಸಾಗುತ್ತಿದ್ದರು. ಅಂತಹ ನೀರಿನ ತೊಟ್ಟಿಗಳನ್ನು ಕೆಲವೆಡೆ "ಸಿಲೀಂದ್ರ" ಎಂದು ಕರೆಯುತ್ತಾರೆ (ವಿಜಯ ಕರ್ನಾಟಕ, ೧೧.೫.೦೬). ಸಂಸ್ಕೃತದಲ್ಲಿ "ಶಿಲೀಂಧ್ರ" ಎಂದರೆ ಅಣಬೆ, ನಾಯಿ ಕೊಡೆ ಎಂದರ್ಥ (ಬಾಣ ಎಂಬರ್ಥವೂ ಉಂಟು). ದೂರದಿಂದ ನೋಡಿದರೆ ಸಿಲೀಂದ್ರವು ಸ್ವಲ್ಪಮಟ್ಟಿಗೆ ನಾಯಿ ಕೊಡೆಯನ್ನು ಹೋಲುತ್ತದೆ. ನಾಯಿ ಕೊಡೆಗೆ ಒಂದು ಕಡ್ಡಿ, ಮೇಲೆ ಗೋಳಾಕಾರದ ಮುಚ್ಚಳವಿರುತ್ತದೆ. ಸಿಲೀಂದ್ರಕ್ಕೆ ನಾಲ್ಕು ಕಾಲು, ಮೇಲೆ ಚೌಕಾಕಾರದ ನೀರಿನ ತೊಟ್ಟಿ. ಕನ್ನಡದ ಸಿಲೀಂದ್ರವು ಸಂಸ್ಕೃತದ ಶಿಲೀಂಧ್ರದ ತದ್ಭವವಿರಬಹುದೇ? ತಿಳಿಯದು. ಹಳ್ಳಿಯ ಜನ ಇರಲಿ, ವಿದ್ವಾಂಸರಿಗೇ ಸಂಸ್ಕೃತದ ಶಿಲೀಂಧ್ರ ಪದ ತಿಳಿಯದು.

ಸಿಲೀಂದ್ರವು ಕನ್ನಡ ಭಾಷೆಯ ರಚನೆಯಾಗಿದ್ದರೆ, ಅದು ಶಿಲೆ+ಹಂದರ ಇರಬಹುದು-ಎಂದರೆ ಕಲ್ಲಿನ ಚಪ್ಪರ. ಶಿಲೆ+ಹಂದರ → ಸಿಲೀಂದ್ರ ಇರಬಹುದೇ ಎಂಬುದು ಕೇವಲ ಒಂದು ಊಹೆ, ಒಂದು ಅನ್ನಿಸಿಕೆ.

ಬಾಲ, ಕಂದ, ಬೇಟ್ (ಹಿಂದಿ. ಹುಡುಗ, ಮಗ) ಇವು ಮೂರೂ ಹೆಚ್ಚು ಕಡಿಮೆ ಸಮಾನಾರ್ಥಕಗಳು. ಆ ಹೆಸರಿನ ಒಂದು ಐತಿಹಾಸಿಕ ಪರಂಪರೆಯ ಬೆಟ್ಟವು ಬಸವ ಕಲ್ಯಾಣಕ್ಕೆ ಸಮೀಪದಲ್ಲಿದೆ. ಅದೊಂದು ಸಮತಟ್ಟಾದ ಚಿಕ್ಕ ಬೆಟ್ಟ-ಅದರ ಮೇಲೆ ಅಲ್ಲಿನ ಬಂಡೆಗಳಲ್ಲಿ ಮಾಡಿರುವ ಗುಂಡಿಗಳಲ್ಲಿ ಕಂಬ ನಿಲ್ಲಿಸಿ ಕಂಬಗಳ ಮೇಲೆ ಗುಡಾರ ಹೊದೆಸಿ ಅದರ ನೆರಳಿನಲ್ಲಿ ಬಸವಣ್ಣನವರು ಸಾವಿರಾರು ಶಿವಭಕ್ತರಿಗೆ ದಾಸೋಹ ಮಾಡುತ್ತಿದ್ದರೆಂದೂ ಅಲ್ಲೇ ಅನುಭವ ಮಂಟಪದ ಸಭೆಗಳು ನಡೆಯುತ್ತಿದ್ದುವೆಂದೂ ಅಲ್ಲಿನ ಸ್ಥಳೀಯರ ಹೇಳಿಕೆ: ಅದು ಕೇವಲ ಶ್ರದ್ಧೆಯ ಸಂಗತಿ. ಐತಿಹಾಸಿಕವಾಗಿ ನಿಜವಿರಬಹುದು, ನಿಜವಲ್ಲದಿರಲೂಬಹುದು.

ಆ ಬೆಟ್ಟವನ್ನು ಜನರು ಬಾಲಕಂದ ಬೇಟ್ ಎಂದು ಕರೆದರೂ ಅದರಲ್ಲಿ ಮಗು ಎಂಬರ್ಥದ ಯಾವುದೇ ಪದ ಮೂಲತಃ ಇರಲಿಲ್ಲ. ಅನುಮಾನವೇ ಇಲ್ಲ - ಅದು ಬಲ್ಲ ಕುಂದ ಬೆಟ್ಟ. ಬಲ್ಲ ಎಂಬುದು ಕರ್ನಾಟಕದಲ್ಲಿ ಪ್ರಚಲಿತವಾಗಿದ್ದ ಸ್ಥಳನಾಮ, (ಆ ಹೆಸರ ಒಂದು ಊರು ಮುಳಬಾಗಿಲು ತಾಲೂಕಲ್ಲಿದೆ). ಅಂತಹ ಊರ ಸಮೀಪದ ಗುಡ್ಡ ಅಥವಾ ಬೆಟ್ಟವೇ ಬಲ್ಲಕುಂದ ( ಆ ಹೆಸರಿನ ನಾಡು ಹಿಂದೆ ೧೧–೧೨ ನೇ ಶತಮಾನಗಳಲ್ಲಿತ್ತು). "ಕುಂದ" ಎಂಬುದೇ ದ್ರಾವಿಡ 'ಕುನ್ಱಂ' (=ಬೆಟ್ಟ): ಇದು ಕನ್ನಡದಲ್ಲಿ ಕುಂದ, ತಮಿಳಿನಲ್ಲಿ "ಕುಂಡ್ರಂ", ತೆಲುಗಿನಲ್ಲಿ ಕೊಂಡ ಆಗಿದೆ (ನೋಡಿ-

ನೀಲಗುಂದ, ನರಗುಂದ, ಮುಳ್ಗುಂದ ಇಲ್ಲೆಲ್ಲ ಗುಡ್ಡಗಳಿವೆ). ಬಲ್ಲ ಕುಂದ ಎಂಬಲ್ಲಿನ ಕುಂದವು ಬೆಟ್ಟದ ಸೂಚಕ ಎಂಬುದನ್ನರಿಯದ ಜನ ಅದಕ್ಕೆ "ಬೆಟ್ಟ" ಎಂಬುದನ್ನು ಹೊಸದಾಗಿ ಸೇರಿಸಿರಬೇಕು. "ಬಲ್ಲ ಕುಂದ ಬೆಟ್ಟ" ಎಂಬುದು ಜನರ ಬಾಯಲ್ಲಿ ಬಾಲಕಂದ ಬೇಟ್ ಆಗಿದೆ (ಆ ಬೆಟ್ಟದ ಬಂಡೆ ಮೇಲೆ 'ಬಾಲಕಂದಬೇಟ್' ಎಂದೇ ಬರೆದಿದೆ. ಬೆಟ್ಟ-ಬೇಟ್). ಭಿನ್ನಾರ್ಥಕ ಪದಗಳು ಸೇರಿರುವ ಸ್ಥಳನಾಮವು ಈಗ ಸಮಾನಾರ್ಥಕ ಪದಗಳ ಗುಚ್ಛವಾಗಿರುವುದು ವಿಚಿತ್ರ.

### ೫. 'ಬೆಂಗಳೂರು'; 'ಹರಪನಹಳ್ಳಿ' ; 'ಉಗ್ರಪ್ಪ'

'ಬೆಂದಕಾಳೂರು' ಎಂಬುದೇ ಬೆಂಗಳೂರಿನ ಸ್ಥಳನಾಮದ ಮೂಲ ಎಂಬ ವಿವರಣೆ ಈಗಾಗಲೇ ತ್ಯಾಜ್ಯವಾಗಿದೆ. "ಬೆಂಗಳೂರು" ಹೆಸರು ಒಂಬತ್ತನೇ ಶತಮಾನದ (ಸು. ೯೦೦) ಬೇಗೂರು ಶಾಸನದಲ್ಲಿ ದೊರಕುವುದು ಎಲ್ಲರಿಗೂ ತಿಳಿದ ವಿಷಯವೇ ಆಗಿದೆ. ಆ "ಬೆಂಗಳೂರು" ಎಂಬುದೇ ಈಗಿನ ಬೇಗೂರು ಆಗುವುದಾದರೆ ಆಗ ಆ ಹೆಸರಿಗೂ ಈಗಿನ ಬೆಂಗಳೂರಿಗೂ ಸಂಬಂಧವೇ ಇರುವುದಿಲ್ಲ. ಅದು ಹಾಗಿರಲಿ, ಸದ್ಯಕ್ಕೆ "ಬೆಂಗಳೂರು" ಎಂಬುದೇ ಬೆಂಗಳೂರಿಗೆ ಅತ್ಯಂತ ಪ್ರಾಚೀನ ಉಲ್ಲೇಖವೆಂದು ಇಟ್ಟುಕೊಳ್ಳಬಹುದು (ಬೆಂಗಳೂರಿಗೆ ಹದಿನೈದು ಕಿಲೋಮೀಟರ್ ದೂರದಲ್ಲಿದೆ ಬೇಗೂರು).

ಬೆಂಗಳೂರು - ಮೈಸೂರು ರಸ್ತೆಯಲ್ಲಿ ಕೆಂಗಲ್ ಊರಿದೆ - ಅನುಮಾನವೇ ಇಲ್ಲ, ಅದು ಕೆನ್ (ಮ್)+ಕಲ್, ಎಂದರೆ, ಕೆಂಪು ಕಲ್ಲಿನ ಊರು ಎಂಬರ್ಥದ್ದು. (ಅಲ್ಲಿ ಕೆಂಪು ಬಂಡೆಗಳಿವೆ.) ಹಾಗೆಯೇ, ಬೆಂಗಳೂರು ಎಂಬುದು ಬೆಳ್+ಕಲ್ ಎಂದರೆ ಬೆಣಚು ಕಲ್ಲಿದ್ದ ಊರು ಎಂಬುದಾಗಿರುವ ಸಾಧ್ಯತೆ ಇದೆ. ಸೆಂಟ್ರಲ್ ಕಾಲೇಜಿನ ಸಮೀಪದಲ್ಲಿ ಅಗೆದಿದ್ದ ದೊಡ್ಡ ಗುಂಡಿಯೊಂದರಲ್ಲಿ ಬಿಳಿ ಕಲ್ಲಿನ ಬಂಡೆಗಳಿದ್ದುವು - ಹಿಂದೆ ಅವುಗಳನ್ನು ನೋಡಿದಾಗಲೇ ಮೇಲಿನ ಊಹೆ ಹೊಳೆದದ್ದು. ಬೆಂಗಳೂರು ಸುತ್ತಮುತ್ತ ಬೆಣಚು ಕಲ್ಲಿನ ಬಂಡೆಗಳು, ಗಣೆಗಳು ಇವೆ. ಬೆಣಚು ಕಲ್ಲು ಎಂಬಲ್ಲಿಯ ಪೂರ್ವಾರ್ಧ ಬಿಳಿಚು ಎಂದರೆ ಬೆಳ್ಳಗಿನದು. ಮನೆ ಕಟ್ಟುವ ಕಲ್ಲಿನ ಗುಂಡುಗಳು, ನೆಲಕ್ಕೆ ಹಾಸುವ ಕಲ್ಲುಗಳು ಇವೆಲ್ಲ ಬೆಳಚುಗಲ್ಲುಗಳೇ. ದೊಡ್ಡ ಬಸವಣ್ಣನ ಗುಡಿ, ಲಾಲ್ ಬಾಗ್, ಇಸ್ಕಾನ್ ದೇವಾಲಯ ಇಲ್ಲೆಲ್ಲ ಭಾರಿ ಬೆಣಚು ಕಲ್ಲಿನ ಬಂಡೆ, ಹೆಬ್ಬಂಡೆ ಕಾಣಬಹುದು. ಸದ್ಯಕ್ಕೇನೋ ಬೆಳ್+ಕಲ್+ಊರು-ಬೆಂಗಳೂರು ಎಂಬುದು ರಾಜಧಾನಿಯ ಹೆಸರಿನ ನಿಷ್ಪತ್ತಿ ಎಂದು ನಾನು ನಂಬಿದ್ದೇನೆ. ('ಬೆಣಚು' ಪದದ ಮೂಲ ಬೆಳ್. 'ಬಿಳುಚು' ಎಂದರೆ ನಾಚಿಕೆಯಿಂದ ಬೆಳ್ಳಗಾಗು ಎಂಬುದು ರೂಢಿಯಲ್ಲಿರುವ ಅರ್ಥ).

ಬಳ್ಳಾರಿ ಜಿಲ್ಲೆಯ ಹರಪನಹಳ್ಳಿ ಎಂಬುದು ಹರಪ(ಪ್ಪ) ಎಂಬ ವ್ಯಕ್ತಿ ನಾಮದಿಂದ ಬಂದದ್ದು ಎಂಬಲ್ಲಿ ಅನುಮಾನವಿಲ್ಲ. ಆ ಪ್ರದೇಶದ ವ್ಯಕ್ತಿನಾಮಗಳ ಸಂಬಂಧ ಸೂಚಕ ದ್ವಿತ್ವಾಕ್ಷರವು ಸರಳಗೊಳ್ಳುತ್ತದೆ. ಉದಾಹರಣೆಗೆ, ಹಂಪನಗೌಡ (=ಹಂಪನ್ನ ಗೌಡ, ಹಂಪಣ್ಣಗೌಡ). ಹಂಪಿ ಪಕ್ಕದ ಮಲಪನ ಗುಡಿಯು ವಾಸ್ತವವಾಗಿ ಮಲ್ಲಪ್ಪನ ಗುಡಿ ಅಥವಾ ಮಲ್ಲೇಶ್ವರ ದೇವಾಲಯ. ಎಸ್. ನಿಜಲಿಂಗಪ್ಪನವರು ಬೆಳೆದ ಊರು, ಕೃಷ್ಣ ಶರ್ಮರ ಹುಟ್ಟೂರು ಚಿತ್ರದುರ್ಗ ಜಿಲ್ಲೆಯ ಸಿದ್ದವನಹಳ್ಳಿ (ಸಿದ್ದವ್ವನ ಹಳ್ಳಿ). ಅದೇ ರೀತಿ, ಹರಪನ ಹಳ್ಳಿಯು ಹರಪ್ಪ ಎಂಬುದರಿಂದ ಬಂದಿದೆ; ಹರಪ್ಪ ಎಂಬುದು ಶಿವಪ್ಪ ಇದ್ದಂತೆ ಶಿವನ ಇನ್ನೊಂದು ಹೆಸರು (ಹರ+ ಅಪ್ಪ). ಇಲ್ಲಿ ತೊಂದರೆಯೆಂದರೆ ಹರಪ್ಪ ಎಂಬ ಹೆಸರನ್ನು ಹಿಂದೆ ಅಥವಾ ಈಗ ಯಾರೂ ಇಟ್ಟುಕೊಂಡಂತಿಲ್ಲ. ಅದು ಮೂಲತಃ "ಪರಪ್ಪ" ಇರಬಹುದು: ಇದು ಪರ್ವತಪ್ಪ ಎಂಬುದರ ಸಂಕ್ಷಿಪ್ತ ರೂಪ. 'ಪರಪ್ಪ' ಎಂಬುದೇ ಪರಪ, ಹರಪ ಆಗಿ ಅಲ್ಲಿಂದ ಹರಪನ ಹಳ್ಳಿ ಸ್ಥಳನಾಮ ರೂಪುಗೊಂಡಿರಬಹುದು.

ಹರ+ಅಪ್ಪ-ಹರಪ್ಪ-ಹರಪ್ಪನ ಹಳ್ಳಿ-ಹರಪನ ಹಳ್ಳಿ

ಪರ್ವತಪ್ಪ-ಪರಪ್ಪ-ಹರಪ್ಪ-ಹರಪನ ಹಳ್ಳಿ

ಈ ಎರಡು ನಿಷ್ಪತ್ತಿಗಳಲ್ಲಿ ಎರಡನೆಯದು ನಿಜವಾಗಿರುವ ಸಾಧ್ಯತೆ ಇದೆ. (ಬೆಂಗಳೂರು ಪಕ್ಕದ ಪರಪ್ಪನ ಅಗ್ರಹಾರ ಊರಿನ ಸೆರೆಮನೆ ಬಹು ಪ್ರಸಿದ್ಧ).

ದಾವಣಗೆರೆ ಬಳ್ಳಾರಿ ಪ್ರದೇಶದ ಕನ್ನಡದಲ್ಲಿ ದ್ವಿತ್ವವು ಸರಳಗೊಳ್ಳುವ ಇನ್ನು ಕೆಲವು ಉದಾಹರಣೆಗಳು: ಚಿಕ್ಕಪ್ಪ-ಚಿಗಪ್ಪ; ಸಣ್ಣವ್ವ-ಸಣವ್ವ; ದೊಡ್ಡವ್ವ-ದೊಡವ (ದೊಡ್ಡಿ); ಚಿಕ್ಕವ್ವ-ಚಿಗವ್ವ (ಚಿಕ್ಕಿ); ಬುಕ್ಕಬೋರನ ಹಳ್ಳಿ-ಬುಕರ್ನಳ್ಳಿ.

'ಶಿವ' ಎಂದರೆ ಮಂಗಳ, ಸೌಮ್ಯ; ಅವನ ಇನ್ನೊಂದು ರೂಪವೇ ರುದ್ರ (=ಭಯಂಕರ). "ಉಗ್ರ" ಮಾತಿಗೆ ಶಿವ ಎಂಬರ್ಥವೂ ಇರಲು ಅದೇ ಕಾರಣ). ಹಿಂದಿನ ಟಿಪ್ಪಣಿಗಳಲ್ಲಿ ಸೂಚಿಸಿರುವ ಹಾಗೆ, ಉಗ್ರಪ್ಪ ಎಂಬುದು ಒಂದರ್ಥದಲ್ಲಿ ಶಿವನಿಗೆ ಸಂಬಂಧಪಟ್ಟ ಹೆಸರು, (ಉಗ್ರಪ್ಪ=ಶಿವಪ್ಪ, ರುದ್ರಪ್ಪ). ಹಂಪಿಯಲ್ಲಿ ಲಕ್ಷ್ಮೀ ಸಮೇತನಾಗಿದ್ದ ನರಸಿಂಹನ ಲಕ್ಷ್ಮೀನರಸಿಂಹ ಶಿಲ್ಪದ ಲಕ್ಷ್ಮೀ ಭಾಗವನ್ನು ಒಡೆದು ಕಿತ್ತುಹಾಕಿದ್ದರಿಂದ ಈಗ ಅದು ಉಗ್ರನರಸಿಂಹ ಎಂದೇ ಖ್ಯಾತವಾಗಿದೆ.

**೬. ಹಕ್ಕ, ಬುಕ್ಕ**

ವಿಜಯನಗರ ಸಾಮ್ರಾಜ್ಯದ ಮೂಲ ಪುರುಷರಾದ ಹಕ್ಕ, ಬುಕ್ಕ ಸೋದರರ ಹೆಸರುಗಳ ಮೂಲ ಸಮಸ್ಯಾತ್ಮಕವಾಗಿದೆ. ಹಕ್ಕನಿಗೆ ಹರಿಹರ ಎಂಬ ಹೆಸರೂ ಇದೆ

- ಅದು ಗ್ರಂಥದ ಅಥವಾ ಸಾಂಪ್ರದಾಯಕ ಹೆಸರಾದರೆ ಜನರ ಬಾಯಲ್ಲಿದ್ದ ರೂಪ ಹಕ್ಕ ಇರುವಂತಿದೆ. (ಸುಬ್ರಹ್ಮಣ್ಯ - ಸುಬ್ಬ, ಮಹಾದೇವ- ಮಾದ ಇದ್ದ ಹಾಗೆ). ಪಂಪನ ಪೋಷಕ ಅರಿಕೇಸರಿಯನ್ನು ಪಂಪನೇ ಅರಿಗ ಎಂದು ಕರೆದಿದ್ದಾನೆ. ಅರಿಗ ಹೆಸರಿನ ವ್ಯಕ್ತಿಗಳು ಪತ್ತನೇ ಶತಮಾನದಲ್ಲಿ ಕಾಣಿಸಿಕೊಳ್ಳುತ್ತಾರೆ. ಅರಿಕೇಸರಿ ಹೆಸರಿನ ರೂಢಿರೂಪ ಅರಿಗ ಆದರೆ, ಹರಿಹರ ಹೆಸರಿನ ಆಡುಮಾತಿನ ಬಳಕೆಯ ರೂಪ ಹರಿಗ ಎಂಬುದಿದ್ದು ಅದೇ ಹಕ್ಕ ಆಯ್ತೋ ಏನೋ!

ಹರಿಹರ - ಹರಿಗ - ಹಕ್ಕ

ಇದೊಂದು ಸಾಧ್ಯ ಊಹೆ ಮತ್ತು ಸಾಧಾರ ಊಹೆಯೂ ಹೌದು.

ಬುಕ್ಕ ಎಂಬುದು ಇನ್ನೂ ಸಮಸ್ಯಾತ್ಮಕವಾಗಿದೆ. ಬೂತುಗ ಎಂಬ ಹೆಸರಿನ ವ್ಯಕ್ತಿಗಳು ಹಿಂದೆ ಇದ್ದರು. 'ಬೂತು' ಎಂದರೆ ಚೇಷ್ಟೆ, ಸೋಗು ಎಂಬರ್ಥಗಳಿದ್ದುವು. ಇದು ದೇಶ್ಯಪದ. ಪಿಶಾಚಿ ಎಂಬರ್ಥದ 'ಬೂತು' ಸಂಸ್ಕೃತ 'ಭೂತ'ದ ತದ್ಭವ. ಕನ್ನಡ ನಿಘಂಟು ಪ್ರಕಾರ ಬೂತುಗ ವ್ಯಕ್ತಿನಾಮವು ಸೋಗು ಎಂಬರ್ಥದ ಬೂತುವಿನಿಂದ ಬಂದಿದೆ. ಬೂತುಗ ಎಂಬ ಈ ಹೆಸರಿನ ಮಾಂಡಲಿಕರು ಹತ್ತನೇ ಶತಮಾನದಲ್ಲಿದ್ದರು. 'ಬೂತುಗ' ಎಂಬುದೇ ಮುಂದೆ ಬುಕ್ಕ ಆಗಿರುವ ಸಾಧ್ಯತೆ ಇದೆ.

ಬುಕ್ಕ ಎಂಬುದಕ್ಕೆ ಸಂಸ್ಕೃತದಲ್ಲಿ ಎದೆ (ಹೃದಯ), ಮೇಕೆ ಎಂಬರ್ಥಗಳಿವೆ; ಕನ್ನಡದಲ್ಲಿ ವ್ಯವಸಾಯದ ಒಂದು ಉಪಕರಣ ಎಂಬರ್ಥವಿದೆ. ಬುಕ್ಕ ಹಿಟ್ಟು ಅಥವಾ ಬುಕ್ಕಿಟ್ಟು ಉತ್ಸವಗಳಲ್ಲಿ ಬಳಸುವ ಸುವಾಸನೆಯ ಪುಡಿ: ಅದನ್ನು ನನ್ನ ಹಳ್ಳಿಯಲ್ಲಿ ಹೆಂಗಸರು ಹಲ್ಲುಜ್ಜಲು ಬಳಸುತ್ತಿದ್ದರು.

ಮುಂದಿನದು ಸ್ವಾರಸ್ಯಕರ ಸಂಗತಿ. ಕರ್ನಾಟಕ, ಆಂಧ್ರಗಳಲ್ಲಿ ಬಲಿಜ ಎಂಬ ತೆಲುಗು ವ್ಯಾಪಾರಿ ಜನಾಂಗವಿದೆ. ವಣಿಜ - ಬಲಿಜ. ವಣಿಜ = ವ್ಯಾಪಾರಿ. ಅವರಲ್ಲಿ ದೇಶ ಅಥವಾ ಕೋಟ (=ಕೋಟೆ) ಮತ್ತು ಪೇಟ (=ಪೇಟೆ) ಎಂಬ ಎರಡು ಉಪವರ್ಗಗಳಿವೆ. ಇದರಲ್ಲಿ ದೇಶ (ಕೋಟ) ವರ್ಗದ ಬಲಿಜ ನಾಯಕರು ಮದುರೆ, ತಂಜಾವೂರು, ವಿಜಯನಗರಗಳ ರಾಜರಾಗಿದ್ದರು (ಅಥವಾ ಅವರ ಮಾಡಲಿಕರಾಗಿದ್ದರು). ಮದುರೆ ತಂಜಾವೂರು ರಾಜರ ವಂಶಸ್ಥರು, ಕಾಶ್ಯಪ ಗೋತ್ರದವರು, ವಿಜಯನಗರ ರಾಜರ ವಂಶಸ್ಥರು ಭಾರದ್ವಾಜ ಗೋತ್ರದವರು; ಇವರೆಲ್ಲ ಚಂದ್ರ ವಂಶದವರು. ಸೇವಪ್ಪನಾಯುಡು ಎಂಬಾತ ವಿಜಯನಗರದ ಅಚ್ಯುತದೇವರಾಯನ ನಾದಿನಿಯನ್ನು ಮದುವೆಯಾಗಿದ್ದನಂತೆ. ಇವರ ಮದುವೆಗಳಲ್ಲಿ ಬ್ರಾಹ್ಮಣರನ್ನು ಅಥವಾ ಸಾತಾನಿಗಳನ್ನು (ಇವರು ಶ್ರೀವೈಷ್ಣವರಾದ ಬ್ರಾಹ್ಮಣೇತರರು,

ವಿಷ್ಣು ದೇವಾಲಯಗಳ ಸಿಬ್ಬಂದಿ) ಕರೆಯುತ್ತಾರೆ. ಬಲಿಜ ದೇಶ ವರ್ಗದವರು, ಕ್ಷತ್ರಿಯ ವರ್ಗದವರೆಂಬುದನ್ನು ಉಳಿದವರು ಒಪ್ಪುವುದಿಲ್ಲ. ಬಲಿಜರ ಆರಾಧ್ಯ ದೈವ "ಗೌರಿ"; ಇದು 'ಗವರೆ' ಎಂಬುದರ ಸಂಸ್ಕೃತೀಕರಣಗೊಂಡ ರೂಪ. ಕವಜ್ಯೆ, ಗವಜಿ ಎಂಬುದು ವರ್ತಕರ ಸಂಘಟನೆಯ ಹೆಸರು.

ಬುಕ್ಕ ಎಂಬುದು ಬಲಿಜರಲ್ಲಿ ಇನ್ನೊಂದು ಉಪವರ್ಗ. ಇವರು ಮುಖ್ಯವಾಗಿ ಅರಿಸಿಣ, ಕುಂಕುಮ, ಬಾಚಣಿಗೆ ಇತ್ಯಾದಿ ಮಾರಾಟಮಾಡುವವರು. ಇವರು ಮೂಲತಃ ಕೋಮಟಿಗಳು (ವೈಶ್ಯರು, ಶೆಟ್ಟರು). ಒಂದು ಕತೆಯ ಪ್ರಕಾರ ಅನ್ಯಜಾತಿಯ ರಾಜನೊಬ್ಬನನ್ನು ಮದುವೆಯಾಗಲು ಒಪ್ಪಿದ ಕನ್ಯಕಮ್ಮ (ಕನ್ನಿಕಾಪರಮೇಶ್ವರಿ) ಎಂಬ ಸುಂದರಿ ಅಗ್ನಿಪ್ರವೇಶ ಮಾಡಿದಾಗ ಬುಕ್ಕ ಜನಾಂಗದವರು ಅವಳಿಗೆ ಅಮೂಲ್ಯವಾದುದನ್ನು ನೀಡದೆ ಬುಕ್ಕ ಪುಡಿ (ಬುಕ್ಕಿಟ್ಟು), ಅರಿಸಿಣ, ಕುಂಕುಮ ನೀಡಿದ್ದರಿಂದ ಅವಳು ಕುಪಿತಳಾಗಿ ಶಾಪ ನೀಡಿ ಅವರು ಕೋಮಟಿಗಳಿಂದ ಬೇರೆಯಾಗಿ ಬದುಕುತ್ತ ಅವರು ನೀಡಿದ ವಸ್ತುಗಳನ್ನು ಮಾತ್ರ ಮಾರಾಟ ಮಾಡಲು ಶಾಪ ನೀಡಿದಳು. ಅಲ್ಲಿಂದ ಬುಕ್ಕ ಜನರು ಕೇವಲ ಅವುಗಳ ಮಾರಾಟ ಮಾಡಿ ಬದುಕಬೇಕಾಯ್ತು.

ಕೋಮಟಿಗಳಲ್ಲಿ 'ಗವರ' ಎಂಬ ವರ್ಗವಿದೆ (ಅದೇ ಗವಜಿ) - ಇವರು, ನಗರೇಶ್ವರ, ಕನ್ಯಾಕುಮಾರಿ ಆರಾಧಕರು ('ನಕರ'ರು ಎಂದರೆ ನಗರ್ತರು, "ನ-ಕರ"=free from taxation.) ಕನ್ನಿಕಾಪರಮೇಶ್ವರಿ ಅಥವಾ ವಾಸವಾಂಬಿಕಾ ವಿರೂಪಾಕ್ಷನ ಸೋದರಿ. ಕೋಮಟಿಗಳಲ್ಲಿ ಮೇಲೆ ಹೇಳಿದಂತೆ 'ಬುಕ್ಕ ಕೋಮಟಿ'ಗಳದು ಒಂದು ವರ್ಗ (Edgar Thurston: Castes and Tribes of Southern India-I. ಇಲ್ಲಿ 'ಬಲಿಜ', ನೋಡಿ, ಪು. ೧೩೪-೧೪೫, ಪು-೩೯೬; IV. ಇಲ್ಲಿ 'ಕೋಮಟಿ' ನೋಡಿ. ಪು. ೩೦೬-೩೪೮). ಮೇಲಿನ (ಉಪಯುಕ್ತ?) ಮಾಹಿತಿಯನ್ನು ಕೇವಲ ಸ್ವಾರಸ್ಯಕ್ಕಾಗಿ ನೀಡಲಾಗಿದೆ.

**೭. "ಓಬೀರಾಯ"- ಎಂದರೆ ಏನು?**

"ಅದೊಂದು ಓಬೀರಾಯನ ಕಾಲದ್ದು"; "ಅವೆಲ್ಲ ಓಬೀರಾಯನ ಕತೆ - ಅದನ್ನು ಕಟ್ಟಿಕೊಂಡು ನಮಗೇನು?" ಇಂತಹ ಮಾತುಗಳು ಹಳ್ಳಿಗಳಲ್ಲೂ ಉಂಟು. 'ಓಬೀರಾಯ' ಯಾವನೋ ಬಹು ಹಿಂದಿನಕಾಲದ ವ್ಯಕ್ತಿ, ರಾಜ ಎಂಬುದು ಸೂಚಿತವಾಗುತ್ತದೆ. "ಓಬೀರಾಯನ ಕಾಲ" ಎಂದರೆ ಬಹಳ ಹಿಂದಿನ ಕಾಲ. ಆ ಓಬೀರಾಯ ಬಹುಶಃ ಐತಿಹಾಸಿಕ ವ್ಯಕ್ತಿ ಅಲ್ಲ. ಆದರೆ ಆ ಕಲ್ಪಿತ ವ್ಯಕ್ತಿ ಒಬ್ಬ ರಾಯ ಅಥವಾ ರಾಜ.

ಓಬೇರಾಯ ಹೆಸರಿನ ಹೋಟಲುಗಳುಂಟು - ಅವೆಲ್ಲ ಉತ್ತರ ಭಾರತೀಯರಿಗೆ ಸೇರಿದವು. ಓಬೇರಾಯ್ (Oberai) ಹೆಸರಿನ ವ್ಯಕ್ತಿಗಳೂ ಇದ್ದಾರೆ, ಆ ಹೆಸರಿನ ಮೂಲ ತಿಳಿಯದು. ಹಳ್ಳಿಜನರ ಕನ್ನಡದ ಓಬೀರಾಯವು ಉತ್ತರ ಭಾರತದ ಆ ಹೆಸರಾಗಿರುವ ಸಾಧ್ಯತೆ ತೀರ ಕಡಮೆ - ಹೋಲಿಕೆ ಆಕಸ್ಮಿಕವೆಂದು ನನಗನ್ನಿಸಿದೆ.

ಓಬಳಪ್ಪ, ಓಬವ್ವ ಇವು ಅಹೋಬಲದ ರೂಪಾಂತರ. ಅಹೋಬಲ ಎಂದರೆ ನೋಡಿದವರು ಉದ್ಗಾರ ತೆಗೆಯುವಷ್ಟು ಶಕ್ತಿಶಾಲಿ, ನರಸಿಂಹ ಎಂದರ್ಥ. ಕರ್ನೂಲು ಜಿಲ್ಲೆಯ ಅಹೋಬಲದಲ್ಲಿ ನರಸಿಂಹ ದೇವಾಲಯವಿದೆ. ಓಬಳಪ್ಪ ಅಥವಾ ಅಹೋಬಲಕ್ಕೂ 'ಓಬೀರಾಯ'ಕ್ಕೂ ಸಂಬಂಧ ಕಾಣಿಸದು. ಓಬೀರಾಯನ ಉತ್ತರಾರ್ಧ "-ರಾಯ"ವು ರಾಜಸೂಚಕ. ಹಳ್ಳಿಗಳಲ್ಲಿ ಆ ಪದ ಬಳಕೆಯಲ್ಲಿದೆ ("ಮಾರಾಯ" = ಮಹಾರಾಯ; "ಮಾರಾಗಿತ್ತಿ" = ಮಹಾರಾಯಗಿತ್ತಿ - ಇವು ಉದ್ಗಾರದ ಪದಗಳು). ಪೂರ್ವಾರ್ಧವು ಬಹುಶಃ "ಒಬ್ಬಯ್ಯ" ಇರಬಹುದು. ಒಬ್ಬಯ್ಯ+ರಾಯ- ಓಬೀರಾಯ. (=ಯಾವನೋ ಒಬ್ಬ ರಾಜ) ಇದೊಂದು ಕೇವಲ ಊಹೆ, ಕನ್ನಡದ ಓಬೀರಾಯಕ್ಕೂ ಉತ್ತರ ಭಾರತದ ಓಬೇರಾಯಕ್ಕೂ ಸಂಬಂಧವಿರುವುದನ್ನು ಯಾರಾದರೂ ತೋರಿಸುವುದಾದರೆ, ಅಥವಾ ಕನ್ನಡದ ಓಬೀರಾಯಕ್ಕೆ ಸರಿಯಾದ ನಿಷ್ಪತ್ತಿಯನ್ನು ತೋರಿಸುವುದಾದರೆ ಅಷ್ಟರಮಟ್ಟಿಗೆ ನನ್ನ ಊಹೆ ಸಾರ್ಥಕ - ನನ್ನ ಊಹೆ ಮುಂದಿನವರಿಗೆ ಸರಿಯಾದ ವಿವರಣೆ ನೀಡಲು ಸಹಾಯ ಮಾಡಿದಂತಾಗುತ್ತದೆ. ನನಗೆ ತಿಳಿದಂತೆ ಓಬೀರಾಯ ಪದದ ವಿವರಣೆಗೆ ಯಾರೂ ಪ್ರಯತ್ನಿಸಿಲ್ಲ. ಸಂಶೋಧನೆಯಲ್ಲಿ ಸಮಸ್ಯೆಯನ್ನು ಗುರುತಿಸುವುದು ಆ ಸಮಸ್ಯೆಗೆ ಉತ್ತರ ಕಂಡುಕೊಳ್ಳುವಷ್ಟೇ ಮುಖ್ಯವಾದುದು. ವೈದ್ಯಕೀಯ ಚಿಕಿತ್ಸೆಯಲ್ಲಿ ರೋಗಿಯ ತೊಂದರೆ ಗುರುತಿಸುವುದು ಆ ರೋಗ ಪರಿಹಾರದಷ್ಟೇ ಮುಖ್ಯವಾದುದು ಎಂಬುದನ್ನು ಮರೆಯಬಾರದು.

## ೮. "ಕಲಾಪಗ್ರಾಮ" ಯಾವುದು?

ಪಂಪನ ತಮ್ಮ ಜಿನವಲ್ಲಭನ ಕುರಿಕ್ಯಾಲ ಶಾಸನದಲ್ಲಿನ ಒಂದು ಪದ್ಯ ಹೀಗಿದೆ-

ಎಸಗಲ್ಗಾಳಿ ಪುಗಲ್ ಪತಂಗಕಿರಣಂ ಸಾರಲ್ಮಿಗಂ ಪಾಱಲಾ
ಗಸದೊಳ್ ಪಕ್ಕಿಗಳಲ್ಲಿ ಸಲ್ಲವೆನ್ನಿಸಿರ್ದನ್ಯೋದಯಂ ಧರ್ಮದೊ
ಳ್ಜಸಮಂ ಪೊಂಪುಟಿ ಮಾಡೆ ಹರಿಗಂ ಪಂಪಂಗೆಗೊಟ್ಟಾ ದ್ವಿಜಾ
ವಸಥ ಗ್ರಾಮಮದೇನ್ನೆಗಟ್ಟಿಯ ಕಳಾಪ ಗ್ರಾಮಮಂ ಪೋಲ್ತುದೋ॥

ಅರಿಕೇಸರಿಯು ('ಹರಿಗ') ವಿಕ್ರಮಾರ್ಜುನ ವಿಜಯ ಬರೆದುದಕ್ಕೆ ಪಂಪನಿಗೆ ಧರ್ಮವುರ ಎಂಬ ಅಗ್ರಹಾರವನ್ನು ದತ್ತಿಯಾಗಿ ನೀಡುತ್ತಾನೆ. ಆ ಧರ್ಮವುರವು ಕರೀಂನಗರ ಜಿಲ್ಲೆಯ ಕುರಿಕ್ಯಾಲ ಗ್ರಾಮದ ಬಳಿ ಇರುವ ಗುಡ್ಡದ ಮೇಲಿನ ಬಂಡೆ ಶಾಸನದ ಕೆಳಗೆ ತಪ್ಪಲಿನಲ್ಲಿದ್ದು ಆ ಗ್ರಾಮವು ಸಂಪೂರ್ಣ ಹಾಳಾಗಿಹೋಗಿದೆ (ಎಂ. ಚಿದಾನಂದ ಮೂರ್ತಿ: 'ಜಿನವಲ್ಲಭನ ಕುರಿಕ್ಯಾಲ ಶಾಸನ: ಹೆಚ್ಚಿನ ಶೋಧಗಳು ಮತ್ತು ವ್ಯಾಖ್ಯಾನಗಳು'. ಹೊಸತು ಹೊಸತು. ೨೦೦೭. ಪು. ೯೦-೧೧೧). ಶಾಸನವು ಸುಸ್ಥಿತಿಯಲ್ಲಿದೆ. ಹತ್ತನೇ ಶತಮಾನದ 'ದ್ವಿಜಾವಸಥ' ಗ್ರಾಮದ (ಅಗ್ರಹಾರದ) ವರ್ಣನೆ ಮೇಲಿನ ಪದ್ಯದಲ್ಲಿದೆ. ಆ ಅಗ್ರಹಾರ ಧರ್ಮವುರವು ಪ್ರಸಿದ್ಧವಾದ ಕಳಾಪಗ್ರಾಮವನ್ನು ಹೋಲುತ್ತದೆ ಎಂಬ ಕೊನೆಯ ಸಾಲಿನ ಮಾತು ಗಮನಾರ್ಹ.

ಆ ಕಳಾಪಗ್ರಾಮ ಅಥವಾ ಕಲಾಪಗ್ರಾಮವು ಸಂಸ್ಕೃತ ಪುರಾಣಗಳಲ್ಲಿ ಬರುವ ಒಂದು ಊರು. ಋಷಿಗಳಿಂದ ಪ್ರಸಿದ್ಧವಾಗಿದ್ದ ಕಲಾಪಗ್ರಾಮವು ಹಿಮಾಲಯ ಪರ್ವತಗಳ ಪೂರ್ವದಿಕ್ಕಿನ ತಪ್ಪಲಿನಲ್ಲಿ, ಗಂಗಾನದಿಯ ದಡದಲ್ಲಿತ್ತು. ಅದು ಮನು ಇದ್ದ ಜಾಗ; ದೇವಾಪಿ, ಪುರು ಇವರು ಅಲ್ಲೇ ಯೋಗಾಭ್ಯಾಸ ಮಾಡಿದರು. ಕಲಿಯುಗ ಮುಗಿದ ಬಳಿಕ ಅವರು ವರ್ಣಾಶ್ರಮ ಧರ್ಮವನ್ನು ಮತ್ತೆ ಆರಂಭಿಸುತ್ತಾರೆ. - ಅಲ್ಲಿ ಯೋಗಾಭ್ಯಾಸ ಮಾಡಿದ ಮನುವಿನ ಸಂತತಿಯವರೇ ಕೃತ, ತ್ರೇತಾ, ದ್ವಾಪರ ಯುಗಗಳಲ್ಲಿ ಕ್ಷತ್ರಿಯರಾಗಿ ಆಳಿದ್ದು. ಕಲಿಯುಗವನ್ನು ಅಂತ್ಯಗೊಳಿಸಿ 'ಧರ್ಮ'ವನ್ನು ಮತ್ತೆ ನೆಲೆಗೊಳಿಸಿದ ಮಹಾತ್ಮರು ಇದ್ದ ಜಾಗ ಕಲಾಪ ಗ್ರಾಮ. (V.R. Ramachandra Dixitar: Purana Index. I. 2003. 'ಕಲಾಪಗ್ರಾಮ' ನೋಡಿ), ಇದು ಪುರಾಣೋಕ್ತ ಸಂಗತಿ.

ಕಲಾಪದಂತೆಯೇ ಧರ್ಮವುರವೂ ಉನ್ನತ ಬೆಟ್ಟದ ತಪ್ಪಲಿನಲ್ಲಿದೆ; ಪಂಪನ ಪ್ರಕಾರ ಧರ್ಮಾತ್ಮರಾದ ಬ್ರಾಹ್ಮಣರಿಂದ ತುಂಬಿದ್ದಿತು. ಈ ಬಗ್ಗೆ ಹೆಚ್ಚಿನ ಅಧ್ಯಯನಗಳನ್ನು ಮಾಡಲಿದ್ದೇನೆ. ಕಿಟಲ್ ಕನ್ನಡ ನಿಘಂಟಿನಲ್ಲಿ (Kannada- English Dictionary) ಕಲಾಪ ಪದಕ್ಕೆ ಸಮೂಹ ಎಂಬರ್ಥವಲ್ಲದೆ ಕಲಿಯುಗದ ನಾಶ ಮಾಡಲಿರುವ ಕಲ್ಕಿ ಅವತರಿಸಲಿರುವ ಊರು ಎಂಬರ್ಥ ನೀಡಿದ್ದಾರೆ. ಅದಕ್ಕೆ ಆಧಾರಗಳನ್ನು ನೀಡಿಲ್ಲ. ಮೋನಿಯರ್ ವಿಲಿಯಮ್ಸ್ ತಮ್ಮ ನಿಘಂಟಿನಲ್ಲಿ (A Sanskrit English Dictionary) ವಾಯುಪುರಾಣದ ಆಧಾರ ನೀಡಿ ಒಂದು ಹಳ್ಳಿಯ ಹೆಸರು ಎಂದಿದ್ದಾರೆ. ಇದೇ ಸರಿಯಾದ್ದು - "ಕಲಾಪಗ್ರಾಮ" ಎಂಬುದೇ ಪುರಾಣೋಕ್ತ ಊರಿನ ಹೆಸರಾಗಿರುವಂತಿದೆ.

ಕಲಿಯುಗವನ್ನು ಅಂತ್ಯಗೊಳಿಸಿದ ವಿಷ್ಣುವಿನ ಹತ್ತನೆಯ ಅವತಾರವಾದ ಕಲ್ಕಿಯ ಉದಯವಾದುದು ಶಂಭಲ ಎಂಬ ಊರಿನಲ್ಲಿ (ಮೊರಾದಾಬಾದ್ ಜಿಲ್ಲೆಯ ರತದ್ರಾ,

ಗಂಗಾನದಿ ಮಧ್ಯದ ಈಗಿನ ಸಂಭಲ್ ಇರಬಹುದೆಂದು ಊಹಿಸಲಾಗಿದೆ). ಕಲಿಯು ಕ್ರೋಧ, ಹಿಂಸಾ ಇವರ ಮಗನಾಗಿ ಹುಟ್ಟಿ ದುರುಕ್ತಿಯನ್ನು ಮದುವೆಯಾಗಿ ಭಯ, ಮೃತ್ಯುಗಳೆಂಬ ಮಕ್ಕಳನ್ನು ಪಡೆದ. ರಾಜನಾಗಿದ್ದರೂ ಶೂದ್ರ; ಅವನು - ಹಸು, ವೃಷಭಗಳನ್ನು ಕಾಲಿನಿಂದ ಒದ್ದ. ಅವನ ಇನ್ನೊಬ್ಬ ಮಗ ಅಧರ್ಮನು ಮಕ್ಕಳ ಮತ್ತು ಹೇಡಿಗಳ ಮಧ್ಯೆ ಮಾತ್ರ ಶೂರ; ನಿಜವಾದ ಶೂರರ ಮುಂದೆ ಹೇಡಿ. ಕಲಿಯ ಆಡಳಿತದಲ್ಲಿ ಧರ್ಮವು ವಿನಾಶದ ಅಂಚನ್ನು ತಲುಪಿದಾಗ ವಿಷ್ಣು ಅವನ ಆಡಳಿತದ ಅಂತ್ಯದಲ್ಲಿ ಶಂಭಾಲದಲ್ಲಿ ವಿಷ್ಣು ಯಶನ್ ಎಂಬ ಬ್ರಾಹ್ಮಣನ ಮಗನಾಗಿ ಜನಿಸಿ, ದೇವದತ್ತ ಎಂಬ ಬಿಳಿ ಕುದುರೆ ಏರಿ ಖಡ್ಗ ಹಿಡಿದು ಬ್ರಾಹ್ಮಣ ಯೋಧರ ಸಹಾಯ ಪಡೆದು ಕಲಿಯ ಮಗ ಅಧರ್ಮನನ್ನು ಕೊಂದು ಕಲಿಯುಗವನ್ನು ಅಂತ್ಯಗೊಳಿಸಿದ. ಅಂದಿನಿಂದ ಧರ್ಮ ಪ್ರಾಧಾನ್ಯದ ಕೃತಯುಗ ಆರಂಭವಾಯ್ತು. ಈ ಇಡೀ ಪೌರಾಣಿಕ ಕಲ್ಪನೆ ಸಾಂಕೇತಿಕ ಮತ್ತು ಧ್ವನಿಪೂರ್ಣ.

### ೯. "ಸಿದ್ದವ್ವ", "ಮರುಳಯ್ಯ" - ಹೆಸರುಗಳ ಮೂಲ

"ಸಿದ್ಧ" - ಸಂಸ್ಕೃತದ ಈ ಪದ ಯೋಗಿ ಎಂಬ ಅರ್ಥವನ್ನು ಹೊಂದಿರುವುದು ಪ್ರಸಿದ್ಧ. "ಮರುಳ" ಎಂಬುದು ದ್ರಾವಿಡ ಪದ - ಕನ್ನಡದಲ್ಲಿ ಅದಕ್ಕೆ ಹುಚ್ಚ, ಭ್ರಾಂತ ಎಂಬರ್ಥಗಳಿವೆ. ಸಿದ್ದವ್ವ (-ಪ್ಪ, -ಯ್ಯ), ಮರುಳಯ್ಯ (-ಪ್ಪ) ಈ ಹೆಸರುಗಳ ನೇರ ಮೂಲ ಆ ಪದಗಳು ಅಲ್ಲ. ವೀರಶೈವ ಧಾರ್ಮಿಕ ಪರಂಪರೆಯಲ್ಲಿ ರೇವಣಸಿದ್ಧ, ಮರುಳಸಿದ್ಧ (ರೇವಣಾರಾಧ್ಯ, ಮರುಳಾರಾಧ್ಯ) ಇವರು ಐವರು ಆಚಾರ್ಯರಲ್ಲಿ ಸೇರಿದವರು ಮತ್ತು ಆ ಐವರು ಆಚಾರ್ಯರಲ್ಲಿ ಕೊನೆಯ ವಿಶ್ವಾರಾಧ್ಯರನ್ನು ಬಿಟ್ಟರೆ ಉಳಿದ ನಾಲ್ವರೂ ಬಸವಣ್ಣ, ಅಲ್ಲಮರ ಸಮಕಾಲೀನರು (ಇದನ್ನು ನಾನು ಸ್ಪಷ್ಟ ಆಧಾರಗಳಿಂದ ಹಲವೆಡೆ ತೋರಿಸಿದ್ದೇನೆ). ರೇವಣಸಿದ್ಧ, ಮರುಳಸಿದ್ಧ ಎಂಬ ಹೆಸರುಗಳ ಕೊನೆಯ "ಸಿದ್ಧ", ಮತ್ತು ಆರಂಭದ 'ಮರುಳ' ಎಂಬುವೇ ಸಿದ್ಧವ್ವ, ಸಿದ್ದಪ್ಪ, ಮರುಳಪ್ಪ, ಮರುಳಯ್ಯ ಎಂಬ ವ್ಯಕ್ತಿನಾಮಗಳಾಗಿ ಬಳಕೆಯಾಗಿವೆ.

"ರೇವಣ" ಎಂಬುದರ ಉತ್ತರಾರ್ಧವು "ಅಣ್ಣ"ದ ಸಂಕ್ಷಿಪ್ತರೂಪ. ರೇವಪ್ಪ, ರೇವಣಪ್ಪ ಎಂಬ ಹೆಸರುಗಳು ಅಲ್ಲಿಂದ ಮೂಡಿಬಂದಿವೆ. -'ಸಿದ್ಧ', 'ಮರುಳ-' ಹೆಸರುಗಳು ಮೂಲತಃ ಯೋಗ ಸಾಧನೆ ಮಾಡಿದ ಶ್ರೇಷ್ಠರಿಂದ ಆರಂಭವಾಗಿ ಮುಂದೆ ವ್ಯಕ್ತಿನಾಮಗಳಾದವು. ರೇವಣಸಿದ್ಧ ಒಬ್ಬ ಬಹು ದೊಡ್ಡ ಯೋಗಿ; ಮರುಳಾರಾಧ್ಯ ಶಿವನ ಹುಚ್ಚನ್ನು ತಲೆಗೆ ಹಚ್ಚಿಕೊಂಡಿದ್ದ ಒಬ್ಬ ಸಾಧಕ.

ಪಂಚಾಚಾರ್ಯರಲ್ಲಿ ಉಳಿದ ಏಕೋರಾಮಾರಾಧ್ಯ, ಪಂಡಿತಾರಾಧ್ಯ, ವಿಶ್ವಾರಾಧ್ಯರ ಹೆಸರುಗಳೂ ಬಳಕೆಯಲ್ಲಿವೆ- ಆದರೆ ಬಹು ವಿರಳ.

೧೦. -"ಅಮ್ಮನ್" (=ತಂದೆ) - ಲಂಕಾದ ವ್ಯಕ್ತಿನಾಮಗಳಲ್ಲಿ

ಇಂದಿನ ಪತ್ರಿಕೆಗಳಲ್ಲಿ (ವಿಜಯ ಕರ್ನಾಟಕ, ೧೯.೫.೦೯) ಶ್ರೀಲಂಕಾದಲ್ಲಿ ಸೈನ್ಯವು ತಮಿಳು ಈಳಂ ಪ್ರತ್ಯೇಕವಾದಿಗಳ ಮೇಲೆ ಅಂತಿಮ ವಿಜಯವನ್ನು ಸಾಧಿಸಿ ಎಲ್ಟಿಟಿಈ ಸಂಘಟನೆಯ ಪ್ರಭಾಕರನ್ ಹೆಸರಿನ ಮುಖ್ಯಸ್ಥನನ್ನು ಕೊಂದಿರುವುದು ವರದಿಯಾಗಿದೆ. ಸಾವಿರಾರು ಅಮಾಯಕ ಮುಗ್ಧ ತಮಿಳರು ಆ ಧಾಳಿಯಲ್ಲಿ ಸತ್ತಿರುವುದು ಒಂದು ಘೋರ ದುರಂತ. ಶ್ರೀಲಂಕಾದ ತಮಿಳರು ಒಟ್ಟಾರೆ ಪ್ರತ್ಯೇಕತೆಯ ವಾದವನ್ನು ಬಿಟ್ಟು ಶ್ರೀಲಂಕಾದ ಆಡಳಿತವನ್ನು ಒಪ್ಪಿಕೊಂಡು ತಮ್ಮ ಹಕ್ಕೊತ್ತಾಯಗಳಿಗೆ ಹೋರಾಟ ಮಾಡಿದ್ದರೆ ಉಚಿತವಾಗಿರುತ್ತಿತ್ತು. ಅದು ಬೇರೆ ವಿಷಯ.

ಪ್ರಭಾಕರನ್ ಜೊತೆಯಲ್ಲಿ ಕಪಿಲ ಅಮ್ಮನ್, ಕರುಣಾ ಅಮ್ಮನ್, ಪೊಟ್ಟು ಅಮ್ಮನ್, ಕೋಟೆ ಅಮ್ಮನ್ ಎಂಬ ಮುಖಂಡರೂ ಹತ್ಯೆಯಾಗಿದ್ದಾರೆ. ಅವರ ಹೆಸರಿನ ಉತ್ತರಾರ್ಧ -"ಅಮ್ಮನ್" ಎಂಬುದು ವಿಶೇಷ ಗಮನಾರ್ಹ. "ಅಮ್ಮನ್" ಎಂಬುದು ಸಾವಿರ ವರ್ಷಗಳಿಗೂ ಹಿಂದೆ ಕನ್ನಡದಲ್ಲಿ ಬಳಕೆಯಾಗಿದ್ದು ಅದಕ್ಕೆ ಅಪ್ಪ, ತಂದೆ ಎಂಬ ಅರ್ಥವಿದ್ದಿತು. ಅಲ್ಲಮನ್ (=ಅಲ್ಲಮ) ಮುಂತಾದ ಹೆಸರುಗಳಲ್ಲಿನ ಕೊನೆಯ '-ಮ'ವು ಅಮ್ಮನ್ ಪದದ ಸಂಕ್ಷಿಪ್ತರೂಪ. (ಅಲ್ಲ+ಅಮ್ಮನ್- ಅಲ್ಲಮ್ಮನ್- ಅಲ್ಲಮ). ಈಗಿನ ಕೃಷ್ಣಮಾಚಾರ್ಯ ಮೂಲತಃ ಕೃಷ್ಣಮ್ಮಾಚಾರ್. (ನೋಡಿ- ಎಂ. ಚಿದಾನಂದಮೂರ್ತಿ; 'ಅಮ್ಮನ್, ಅಬ್ಬೆ, ಅಲ್ಲಮ, ಬಾದುಬ್ಬೆ'. ಭಾಷಾ ವಿಜ್ಞಾನ ಮತ್ತು ಛಂದಸ್ಸು. ಪು. ೨೦೪-೨೨೧.) ಆದರೆ ನನಗೆ ತಿಳಿದಮಟ್ಟಿಗೆ ತಮಿಳಿನಲ್ಲಾಗಲಿ ಕರ್ನಾಟಕದಲ್ಲಾಗಲಿ ಈಗ ಅಮ್ಮನ್ ಎಂಬುದು ಇಡಿಯಾಗಿ ಬಳಕೆಯಾಗಿಲ್ಲ. ಆದರೆ ಅದು ಹಿಂದೆ ಲಂಕಾದ ತಮಿಳಿನಲ್ಲಿದ್ದು ಈಗಿನ ಲಂಕಾದ ಆಧುನಿಕ ತಮಿಳು ವ್ಯಕ್ತಿನಾಮಗಳಲ್ಲಿ ಉಳಿದು ಬಂದಿರುವುದು ವಿಶೇಷ. ಈಚೆಗೆ ತಿಳಿದುಬಂದಿರುವಂತೆ ತಮಿಳುನಾಡಿನ ಈರೋಡ್ ಜಿಲ್ಲೆಯಲ್ಲಿ ವಾಸುಕಿ ಅಮ್ಮನ್, ನಾಗಾ ಅಮ್ಮನ್, ಶಂಕರ ಅಮ್ಮನ್ ಹೆಸರುಗಳಿವೆ. (ಥೈಲಂಡಿನ ರಾಣಿಯ ಹೆಸರು "ಮಹಾಚಕ್ರಿ ಶ್ರೀಧರನ್" ಸಂಸ್ಕೃತ ಹೆಸರಿಗೆ ದ್ರಾವಿಡದ ಪುಲ್ಲಿಂಗ ಏಕವಚನ ಪ್ರತ್ಯಯ ಸೇರಿರುವುದು ಗಮನಾರ್ಹ. ಚಕ್ರಿನ್=ಚಕ್ರವರ್ತಿ) ಕೊಡಗು ಜಿಲ್ಲೆಯ ಅಯ್ಯಮ್ಮ (೧೦೫) ಎಂಬ ವೃದ್ಧನ ಪತ್ನಿ ಪೂವಮ್ಮ : ಗಂಡ ಹೆಂಡತಿ ಹೆಸರಿನ ಕೊನೆಯಲ್ಲಿ '-ಅಮ್ಮ' ಇರುವುದು ಸ್ವಾರಸ್ಯ. (ವಿಜಯ ಕರ್ನಾಟಕ ೧೨.೧೧.೨೦೧೧.) ಅಯ್ಯಮ್ಮ= ಅಯ್ಯಮ್ಮನ್. ಈ ಪದ್ಧತಿ ಅಮ್ಮ ಕೊಡವರಲ್ಲಿದೆ.

೧೧. "ನಾಲ್ಕು ನಾಲ್ಕಲ ಹದಿನಾರು" : "-ಲ" ಮೂಲ ಯಾವುದು?

ಪ್ರಾಥಮಿಕ ಶಾಲೆಗಳಲ್ಲಿ ಮಕ್ಕಳಿಗೆ 'ಮಗ್ಗಿ' (ಕೋಷ್ಟಕದ ಒಂದು ಪ್ರಭೇದ) ಹೇಳಿಕೊಡುತ್ತಿದ್ದುದು ಹೀಗೆ:

ಎರಡು ಒಂದಲ ಎರಡು
ಎರಡು ಎರಡಲ ನಾಲ್ಕು
ಎರಡು ಮೂರಲ ಆರು
............................
ಎರಡು ಎಂಟಲ ಹದಿನಾರು
ಎರಡು ಒಂಬತ್ತಲ ಹದಿನೆಂಟು
ಎರಡು ಹತ್ತಲ ಇಪ್ಪತ್ತು.

"ಮೂರಲ", "ಹತ್ತಲ" ಎಂಬಲ್ಲಿನ "-ಲ-" ಭಾಗದ ಮೂಲ ಏನು?

ಅದು ಬಹುಶಃ -ಕಳ್ (-ಗಳ್) ಎಂಬ ಬಹುವಚನ ಪ್ರತ್ಯಯದ ಸಂಕ್ಷಿಪ್ತ ರೂಪ. ಎರಡು ಎರಡುಗಳು ಸೇರಿದರೆ ನಾಲ್ಕು, ನಾಲ್ಕು ಎಂಟುಗಳು ಸೇರಿದರೆ ಮೂವತ್ತೆರಡು ಆಗುತ್ತದೆ. ಮೂರುಗಳ್ - ಮೂರಲ, ಎಂಟುಗಳ್–ಎಂಟಲ ಹೀಗೆ ಸಂಕ್ಷೇಪಗೊಂಡಿರುವ ಸಾಧ್ಯತೆ ಇದೆ. ಇದಕ್ಕೆ ತೆಲುಗು ಭಾಷೆಯ 'ಎಕ್ಕ' (=ಮಗ್ಗಿ) ಪುಷ್ಟಿ ನೀಡುತ್ತದೆ. "ರೆಂಡು ರೆಳ್ಳು ನಾಲ್ಕು" (ಎರಡು ಎರಡರ ನಾಲ್ಕು). ರೆಳ್ಳು = ರೆಂಡು. ಲು ("ಲು" ಎಂಬುದು ದ್ರಾವಿಡದ - ಕಳ್, -ಗಳ್ ಎಂಬುದಕ್ಕೆ ಸಂವಾದಿಯಾದ ತೆಲುಗು ಪ್ರತ್ಯಯ.) ಮೂರಲ, ನಾಲ್ಕಲ ಎಂಬ ಕನ್ನಡ ಪದಗಳಿಗೆ ಪರ್ಯಾಯವಾಗಿ ತೆಲುಗಲ್ಲಿ ಮೂರ್ಲು, ನಾಲ್ಗುಲು ಇವೆ.

ಉತ್ತರ ಕರ್ನಾಟಕದಲ್ಲಿ (ಬಳ್ಳಾರಿ ಪ್ರದೇಶದಲ್ಲಿ) -ಲ ಜಾಗದಲ್ಲಿ - ಲೆ ಇದೆ. ಉದಾ: ನಾಲ್ಕು ನಾಲ್ಕಲೆ ಹದಿನಾರು. ಈ '-ಲೆ'ಯು "-ಗಳೇ" ಎಂಬುದಾಗಿರಬಹುದು. ನಾಲ್ಕು ನಾಲ್ಕುಗಳೇ ಹದಿನಾರು-'ನಾಲ್ಕು ನಾಲ್ಕಲೇ ಹದಿನಾರು.'

**೧೨. ದಲಿತ ವರ್ಗದಲ್ಲಿ ಸಾಂಪ್ರದಾಯಕ "ಗುಡ್ಡನ್ನ ಬಿಡೋದು" (ಲಿಂಗಧಾರಣೆ)**

ನನ್ನ ತೀರ ಸಮೀಪ ಬಂಧು ಮೈಸೂರು ಜಿಲ್ಲೆಯ ಬಲಗೈ ದಲಿತ ವರ್ಗದವರು; ನನ್ನ ಹೆಂಡತಿಯ ಕೊನೆಯ ತಂಗಿ ಅವರ ಎರಡನೆಯ ಪತ್ನಿ. ಅವರ ಮೊದಲ ಹೆಂಡತಿಯ ಮಗ ಮತ್ತು ನನ್ನ ಹೆಂಡತಿ ತಂಗಿಯ ಮಗ ಇಬ್ಬರಿಗೂ ಮೈಸೂರಿನಲ್ಲಿ ಈಚೆಗೆ ಒಟ್ಟಿಗೆ "ಗುಡ್ಡನ್ನ ಬಿಡೋದು" ನಡೆಯಿತು (೩೧.೫.೦೯), ಅದರ ಮಾರನೆಯ ದಿನವೇ ಮೊದಲ ಹೆಂಡತಿಯ ಮಗನ ಮದುವೆ; ಆ ಶಾಸ್ತ್ರವನ್ನು ವಿದ್ಯಾವಂತರು ಲಿಂಗಧಾರಣೆ ಎನ್ನುತ್ತಾರೆ.

"ಲಿಂಗಧಾರಣೆ" ಹೆಸರನ್ನು ಕೇಳುತ್ತಿದ್ದಂತೆ ನಾನು ಆಶ್ಚರ್ಯಚಕಿತನಾಗಿ ಎಲ್ಲವನ್ನೂ ಆ ಗಲಾಟೆ ಮಧ್ಯೆ ಸೂಕ್ಷ್ಮವಾಗಿ ಗಮನಿಸಿ, ನನ್ನ ಕೈಲಿದ್ದ ಮದುವೆ ಆಹ್ವಾನ ಪತ್ರದ ಕವರಿನ ಮೇಲೆ ಸಂಕ್ಷಿಪ್ತ ಟಿಪ್ಪಣಿ ಮಾಡಿಕೊಂಡೆ.

ಅದೊಂದು ಸಾಂಪ್ರದಾಯಕ "ಗುಡ್ಡನ್ನ ಬಿಡೋದು" -ಅದರಲ್ಲಿ ಪೌರೋಹಿತ್ಯ ವಹಿಸಿದ (ದೇವರ) ಗುಡ್ಡಪ್ಪ, ದಾಸಪ್ಪ, ಜೋಗಪ್ಪ ಎಂದು ಜನ ಕರೆಯುವ ಮೂವರೂ ದಲಿತರೇ. (ಅವರ ಹುಟ್ಟು ಹೆಸರುಗಳು ಪುಟ್ಟಶಾಮಯ್ಯ ಅಥವಾ ಬಸನಲಿಂಗಪ್ಪ, ದಾಸಪ್ಪಯ್ಯ, ಭೈರಪ್ಪ). ಗುಡ್ಡಪ್ಪ, ಜೋಗಪ್ಪ ಭಸ್ಮ ಧರಿಸಿದರೆ ದಾಸಪ್ಪ ನಾಮ ಧರಿಸುತ್ತಾನೆ. ಗುಡ್ಡಪ್ಪ ದೊಡ್ಡ ತಾಳ, ದಾಸಪ್ಪ ಜಾಗಟೆ, ಜೋಗಪ್ಪ ಕೊಂಬು ನುಡಿಸುತ್ತಾರೆ. ತಾಳ, ಜಾಗಟೆ ಇವು ಪರಿಚಿತ; ಆದರೆ ನಾನು ನಿಜವಾದ ಕೊಂಬನ್ನು ನೋಡಿದ್ದು ಅದೇ ಮೊದಲು. ಎಲ್ಲ ಕಡೆಗೂ ಕೊಂಬುಗಳು ಲೋಹದಲ್ಲಿ ಮಾಡಿದವಾಗಿದ್ದು ಉದ್ದಕ್ಕೆ ಚಾಚಿ ತುದಿಯಲ್ಲಿ ಬಾಗಿರುತ್ತವೆ. ಇಲ್ಲಿ ನಾನು ಕಂಡದ್ದು ಕಡವ (ವೆ) ಎಂಬ ಜಿಂಕೆ ರೀತಿಯ ಪ್ರಾಣಿಯ ಕೊಂಬು ಅಥವಾ ಕೋಡು (ಕಡವೆ ಪ್ರಾಣಿಯ ಕೊಂಬು ಎಂದು ಜೋಗಪ್ಪನೇ ಹೇಳಿದ್ದು.) ಹಿಂದೆ ಜನ ಊದುತ್ತಿದ್ದ ಕೊಂಬು ಮೂಲತಃ ಕಾಡು ಪ್ರಾಣಿಗಳ ಕೊಂಬು (ಕೋಡು) ಆಗಿದ್ದು, ಮುಂದೆ ಅವುಗಳ ಜಾಗದಲ್ಲಿ ಲೋಹದ ವಾದ್ಯ ಕಾಣಿಸಿಕೊಂಡರೂ ಹೆಸರು ಮಾತ್ರ ಹಿಂದಿನ ಕೊಂಬು ಉಳಿಯಿತು. (ಇಂಗ್ಲಿಷಿನಲ್ಲೂ Horn ಎಂದರೆ ಪ್ರಾಣಿಗಳ ಕೋಡು, ವಾದ್ಯ ಎಂದರ್ಥ). ಅನಾಗರಿಕತೆಯ ಹಿಂದಿನ ಕಾಲದಲ್ಲಿ ಬಳಸುತ್ತಿದ್ದ ಕೊಂಬಿನ ಬಳಕೆ ಈಗಲೂ ಉಳಿದು ಬಂದಿರುವುದು ಒಂದು ಅಪೂರ್ವ ಸಂಗತಿ. (ಕೆಲವರು ಅದನ್ನು ಸಿಂಗಿ ಎನ್ನುತ್ತಾರೆ. ಶೃಂಗ ಎಂದರೆ ಸಂಸ್ಕೃತದಲ್ಲಿ ತುದಿ, ಎತ್ತಿನ ಅಥವಾ ಪ್ರಾಣಿಗಳ ಕೋಡು.) ನಾನು ನೋಡಿದ ಕೊಂಬು ಸುಮಾರು ಒಂದೂವರೆ ಅಡ್ಡಿ ಉದ್ದವಿದ್ದು ಅಲ್ಲಲ್ಲಿ ಸ್ವಲ್ಪ ಬಾಗಿತ್ತು. ಗುಡ್ಡಪ್ಪನ ಎದೆಯ ಮೇಲೆ ರುದ್ರಾಕ್ಷಿ, ದಾಸಪ್ಪನ ಕೊರಳಲ್ಲಿ 'ತೊಳಚಿ ಮಣಿ' (=ತುಳಸಿ), ಜೋಗಪ್ಪನ ಕಿವಿಯಲ್ಲಿ 'ಮುದ್ರೆ' (ಲೋಹದ ಚಿಕ್ಕ ವಸ್ತು) ಇದ್ದುವು.

ಯುವಕನಿಗೆ ಆರಂಭದಲ್ಲಿ ಐವರು ಮುತ್ತೈದೆಯರು ಮೈತುಂಬ ಭಸ್ಮ ಹಚ್ಚಿ ಕುಂಕುಮ ಇಟ್ಟು ತಲೆಯಿಂದ ಅಡಿಯವರೆಗೆ ಒಬ್ಬೊಬ್ಬರೂ ಮೂರು ಸಾರಿ ಎಣ್ಣೆ ಹಚ್ಚುತ್ತಾರೆ. ಹುಡುಗ ಕುಕ್ಕುರುಗಾಲಲ್ಲಿ ಎಡ ಪಾದದ ಮೇಲೆ ಬಲ ಪಾದ ಇಟ್ಟು ಕುಳ್ಳಿರಬೇಕು. ಐದು ಜನ ಮುತ್ತೈದೆಯರೂ ಒಬ್ಬೊಬ್ಬರಾಗಿ ಬಿಸಿ ನೀರು ಎರೆದು ಆರತಿ ಬೆಳಗುತ್ತಾರೆ. ಆ ಶಾಸ್ತ್ರ ಮುಗಿದ ಮೇಲೆ ಒಬ್ಬೊಬ್ಬರೂ ಹುಡುಗನ ಹಣೆಗೆ ಭಸ್ಮ ಹಚ್ಚಿ, ಮೈತುಂಬ ಭಸ್ಮ ಜೊತೆಗೆ ಅರಿಸಿನದ ಪುಡಿ ಬಳಿದು ಬಿಸಿ ನೀರನ್ನು ಎರೆದು ಮತ್ತೆ ಹಣೆಗೆ ಭಸ್ಮ ಹಚ್ಚಿ ಆರತಿ ಬೆಳಗುತ್ತಾರೆ. ಅಲ್ಲಿಗೆ "ಎಣ್ಣೆ ಶಾಸ್ತ್ರ" ಮುಗಿಯಿತು. ಆ ಇಡೀ ಶಾಸ್ತ್ರದ ಉದ್ದಕ್ಕೂ ಗುಡ್ಡಪ್ಪ, ದಾಸಪ್ಪ, ಜೋಗಪ್ಪ ಅಲ್ಲಿದ್ದು ಹರಸುತ್ತಾರೆ. "ಎಣ್ಣೆ ಶಾಸ್ತ್ರ"ದಲ್ಲಿ ಪ್ರಮುಖ ಪಾತ್ರ ಮುತ್ತೈದೆಯರದು.

ಹುಡುಗನ ಸ್ನಾನ ಮುಗಿದ ಮೇಲೆ ಅವನಿಂದ ಮನೆಯ ದೇವರಿಗೆ ಪೂಜೆ ಮಾಡಿಸಿ ಒಂದು ಹಲಗೆಯ ಮೇಲೆ ಕೂರಿಸುತ್ತಾರೆ. ಈ ಶಾಸ್ತ್ರದಲ್ಲಿ ಗುಡ್ಡಪ್ಪ ದಾಸಪ್ಪ ಜೋಗಪ್ಪನವರದೇ ಪಾತ್ರ. ಗುಡ್ಡಪ್ಪನು ಹಣೆಗೆ, ಕಣ್ಣಿನ ಮೇಲೆ ಹುಬ್ಬಿಗೆ, ಕಣ್ಣಿನ ಕೆಳಗೆ, ಕೆನ್ನೆಗೆ, ಇಡೀ ದೇಹಕ್ಕೆ ವಿಭೂತಿ ಸವರುತ್ತಾನೆ. ದಾಸಪ್ಪ ಜಾಗಟೆ ಬಡಿಯುತ್ತಿದ್ದರೆ ಜೋಗಪ್ಪ ಕೊಂಬು ಊದುತ್ತಾನೆ. ಆರತಿ ತಟ್ಟೆಯಲ್ಲಿ ಐದು ತೆಂಗಿನ ಕಾಯಿ ಹಣ್ಣು ಬೆಲ್ಲ ಅಕ್ಕಿ ಇಟ್ಟು ಗುಡ್ಡಪ್ಪ ಅದನ್ನು ಬೆಳಗುತ್ತಾನೆ. ಹುಡುಗನ ಎಡಭಾಗಕ್ಕೆ ಒಂದು ಜೋಳಿಗೆ ನೇತುಹಾಕಿ ಬಲಗೈಗೆ 'ಬೆತ್ತ' ಕೊಡುತ್ತಾನೆ, ಬಲಗೈಗೆ ಉಣ್ಣೆ ದಾರ ('ಕಂಕಣ') ಕಟ್ಟಿ ಅದನ್ನು ಅರಿಸಿಣ ಬಣ್ಣ ಬಳಿದ ಬಟ್ಟೆಯಿಂದ ಕಟ್ಟುತ್ತಾನೆ. ರುದ್ರಾಕ್ಷಿ ಕಟ್ಟಿದ ದಾರವನ್ನು ಗುಡ್ಡಪ್ಪ ಭಕ್ತಿಯಿಂದ ಪೂಜಿಸುತ್ತಾನೆ. ಬಳಿಕ ಹುಡುಗನ ಮುಂದೆ ಗುಡ್ಡಪ್ಪ ಕುಳಿತು, ತಾನೇ ಪ್ರಶ್ನೆ ಕೇಳಿ ತಾನೇ ಉತ್ತರ ಹೇಳುತ್ತಾನೆ– ಆ ಉತ್ತರವನ್ನು ಹುಡುಗ ಹಾಗೇ ಹೇಳಬೇಕು.

| | |
|---|---|
| "ಮೊದಲ ಗುರು ಯಾರು?" | "ಹೆತ್ತ ಅಪ್ಪ ಅಮ್ಮ" |
| "ಎರಡನೆಯ ಗುರು ಯಾರು?" | "ಪಾಠ ಹೇಳಿ ಕೊಟ್ಟ ಮೇಷ್ಟು" |
| "ಮೂರನೆಯ ಗುರು ಯಾರು?" | "ನಾನು. ನಿನಗೆ ಉಪದೇಶ ಕೊಡ್ತಿದೀನಿ" |
| "ನಾಲ್ಕನೆಯ ಗುರು ಯಾರು?" | "ಬಸವಣ್ಣ" |
| "ಐದನೆಯ ಗುರು ಯಾರು?" | "ಶನಿದೇವರು, ಅವನೇ ಜಗದ್ಗುರು". |

ಹುಡುಗನ ಬಾಯಿಂದ ಐದೂ ಉತ್ತರಗಳನ್ನು ಹೇಳಿಸಿದ ಮೇಲೆ ಅವನ ಸುತ್ತ ಬಟ್ಟೆ ಹಿಡಿಯುತ್ತಾರೆ. ("ನೀನು ಸತ್ಯವನ್ನೇ ಹೇಳಬೇಕು" ಎಂಬ ಎಂಬ ಮಾತೂ ನನಗೆ ಕೇಳಿಸಿದಂತಾಯ್ತು). ಗುಡ್ಡಪ್ಪನು ದಾಸಪ್ಪ, ಜೋಗಪ್ಪರ ಮುಂದೆ ಗುಟ್ಟಾಗಿ ಅವನ ಕಿವಿಗೆ "ಓಂ ನಮಃ ಶಿವಾಯ" ಮಂತ್ರ ಉಸುರಿ ರುದ್ರಾಕ್ಷಿ ದಾರ ಕಟ್ಟುತ್ತಾನೆ (ಇದು ಯಾವುದೂ ನಮ್ಮ ಕಣ್ಣಿಗೆ ಕಾಣಿಸಲಿಲ್ಲ). ಅಲ್ಲಿಗೆ ಆ ಹುಡುಗನನ್ನು 'ಗುಡ್ಡ' ನನ್ನಾಗಿ ಮಾಡಿದಂತೆ. ಗುಡ್ಡ ಎಂದರೆ ಶಿಷ್ಯ - ಅವನು ಮಲೆಯ ಮಾದೇಶ್ವರನ ಅಥವಾ ಬಸವಣ್ಣನ ಗುಡ್ಡ (ಶಿಷ್ಯ). ಅವನು ಕೊರಳಲ್ಲಿ ರುದ್ರಾಕ್ಷಿ ಕಟ್ಟಿಸಿಕೊಂಡ ಮೇಲೆ ಗುಡ್ಡಪ್ಪನ ನೇತೃತ್ವದಲ್ಲಿ ದಾಸಪ್ಪ, ಜೋಗಪ್ಪಗಳು ಜಾಗಟೆ ಬಾರಿಸುತ್ತ ಕೊಂಬು ಊದುತ್ತ ಮನೆಯ ಹೊರಕ್ಕೆ ಬಂದರೆ, 'ಗುಡ್ಡ' ಎಡಗೈಗೆ ಜೋಳಿಗೆ ಸಿಕ್ಕಿಸಿಕೊಂಡು ಬಲಗೈಯಲ್ಲಿ ಭಿಕ್ಷಾದಂಡ ('ಬೆತ್ತ') ಹಿಡಿದು ಮನೆ ಮುಂದಿನ ಮನೆಗಳಿಗೆ ಭಿಕ್ಷಕ್ಕೆ ಹೊರಟಾಗ ಅಲ್ಲಿದ್ದವರೂ ಅವರ ಜೋಳಿಗೆಗೆ ಹಣ ಹಾಕುತ್ತಾರೆ; ಭಿಕ್ಷೆಗೆ ಹೋದ

ಐದು ಮನೆಗಳವರೂ ಅಕ್ಕಿ, ಬೆಲ್ಲ, ಹಣವನ್ನು ಹಾಕುತ್ತಾರೆ. ಭಿಕ್ಷೆಗೆ ಹೊರಡುವ ಮುನ್ನ ಗುಡ್ಡ ತನ್ನ ತಂದೆ ತಾಯಂದಿರಿಗೆ 'ಗುಡ್ಡಪ್ಪ' ಗುರುವಿಗೆ ಹಿರಿಯರಿಗೆ ನಮಸ್ಕಾರ ಮಾಡುತ್ತಾನೆ. ಭಿಕ್ಷೆ ಮಾಡಿ ಮುಗಿಸಿ ಬಂದರೆ ಅಲ್ಲಿಗೆ "ಗುಡ್ಡನ್ನ ಬಿಡೋ" ಶಾಸ್ತ್ರ ಮುಗಿದಂತೆ.

ಮನೆಯ ಹಿರಿಯ ಮಗ ಕಡ್ಡಾಯವಾಗಿ "ಗುಡ್ಡ" ಆಗಬೇಕು; ಅವನು ಮುಂದೆ ಮದುವೆ ಆಗಬಹುದು. ಹುಡುಗಿಗೆ ಆ ಶಾಸ್ತ್ರ ಇಲ್ಲ– ಅವಳಿಗೆ ಮದುವೆಗೆ ಮುನ್ನ ಬರೀ 'ದೇವರ ಕಂಕಣ' ಕಟ್ಟುತ್ತಾರೆ. ಹಿರಿಯ ಮಗನ ಬಳಿಕ ಉಳಿದ ಗಂಡು ಮಕ್ಕಳಿಗೆ "ಗುಡ್ಡ" ಆಗುವುದು ಕಡ್ಡಾಯ ಅಲ್ಲ.

"ಗುಡ್ಡನ್ನ ಬಿಡೋ" ಸಂಪ್ರದಾಯದಲ್ಲಿ ಶಿವ, ವಿಷ್ಣು, ಭೈರವ ಈ ಮೂರು ದೈವಗಳ ಆರಾಧನೆ ಇರುವುದು ಗಮನಾರ್ಹ. ಪುರೋಹಿತ ಗುಡ್ಡಪ್ಪನು ಮಲೆಯ ಮಾದೇಶ್ವರನ ಭಕ್ತನಾದರೂ ಬಸವಣ್ಣ ಅವನ 'ಮನೆ ದೇವರು'. ಅವನು ತನ್ನ ಊರಿನ ಗುಡ್ಡದಮ್ಮ ದೇವತೆಯ ಅರ್ಚಕ. ಆಕೆ ಬಹುಶಃ ಮಲೆಯ ಮಾದೇಶ್ವರನ ಪತ್ನಿ. (ಗುಡ್ಡ = ಮಲೆ).

ನನಗೆ ಆಶ್ಚರ್ಯವನ್ನು ತಂದದ್ದು ವೀರಶೈವರಲ್ಲಿ ಜಂಗಮರ 'ಅಯ್ಯಾಚಾರ'ಕ್ಕೂ ಬಲಗೈ ದಲಿತರ 'ಗುಡ್ಡನ್ನ ಬಿಡೋ'ದಕ್ಕೂ ಇರುವ ದಟ್ಟ ಹೋಲಿಕೆ. ಜಂಗಮ ವಟುವಿಗೆ ಪಟ್ಟದ್ದೇವರು ಸಕಲ ಪೂಜಾದಿಗಳು ನೆರವೇರಿದ ಬಳಿಕ ಅವನಿಗೆ ಲಿಂಗಧಾರಣೆ ಮಾಡಿ, ಗುಟ್ಟಾಗಿ ಕಿವಿಯಲ್ಲಿ ಮಂತ್ರೋಪದೇಶವನ್ನು ಮಾಡಿ ಅವನ ಕೈಗೆ ಜೋಳಿಗೆ ನೀಡಿ ಬೆತ್ತ ಕೊಟ್ಟು ಭಿಕ್ಷೆಗೆ ಕಳುಹಿಸಿಕೊಡುತ್ತಾರೆ. ಅವನು ಹೋಗಿ ಮೂರು ಅಥವಾ ಐದು (ಅಥವಾ ಏಳು, ಒಂಬತ್ತು ಇ.) ಮನೆಗಳಿಗೆ ಭಿಕ್ಷೆಗೆ ಹೋಗಿ "ಶಿವಶಿವಾ ಕೋರಾನ್ನದಾಗೆ ಭಿಕ್ಷೆ" ಎಂದು ಹೇಳುತ್ತಾನೆ. ಹೆಣ್ಣು ಮಕ್ಕಳು ಬಂದು ಅವನ ಜೋಳಿಗೆಗೆ ಅಕ್ಕಿ ಹಾಕಿ ನಮಸ್ಕರಿಸಿ ಕಳುಹಿಸುತ್ತಾರೆ. ಅಲ್ಲಿಗೆ ಅವನು ವೀರಶೈವ (ಲಿಂಗಾಯತ) ಆಗಿದ್ದವನು 'ಅಯ್ಯ' ಅಥವಾ ಜಂಗಮ ಆಗಿ ಪೌರೋಹಿತ್ಯಕ್ಕೆ ಅರ್ಹನಾಗುತ್ತಾನೆ. ಹಬ್ಬಗಳಲ್ಲಿ ಅವನನ್ನು ಮನೆಗೆ ಬರಮಾಡಿಕೊಂಡು ಅವನ ಕಾಲು ತೊಳೆದು ಪಾದೋದಕವನ್ನು ತಮ್ಮ ಮೇಲೆ ಸಂಪ್ರೋಕ್ಷಿಸಿಕೊಂಡು ಮನೆಯ ತುಂಬ ಸಂಪ್ರೋಕ್ಷಿಸಿ, ಅವನಿಗೆ ಊಟ ಹಾಕಿ ಅವನ ಶೇಷಪ್ರಸಾದವನ್ನು ಸೇರಿಸಿಕೊಂಡು ಜನ ಊಟ ಮಾಡುತ್ತಾರೆ. ಹೆಣ್ಣು ಮಕ್ಕಳಿಗೆ 'ಅಯ್ಯಾಚಾರ' ಇಲ್ಲ - ಆಕೆ ಹುಟ್ಟಿದಾಗ ಕಟ್ಟಿದ ಲಿಂಗವನ್ನೇ ಇತರರಂತೆ ಪೂಜಿಸುತ್ತಾಳೆ. ಕುಟುಂಬದ ಎಲ್ಲ ಹುಡುಗರಿಗೂ ಅಯ್ಯಾಚಾರ ಕಡ್ಡಾಯ.

ನಾನು ಮದುವೆಗೆ ಬೆಂಗಳೂರಿಂದ ಮೈಸೂರಿಗೆ ಹೋಗಿ ಬಂದ ಟ್ಯಾಕ್ಸಿಯ ಮೇಲೆ "ಹೊನ್ನರಳಮ್ಮ ಬೋರಪ್ಪಾಯ ನಮಃ" ಎಂದು ಬರೆದಿತ್ತು. ಅವು ಟ್ಯಾಕ್ಸಿ ಮಾಲಿಕನು ಪೂಜಿಸುವ ಮಾಗಡಿ ಸಮೀಪದ ಗ್ರಾಮ ದೇವತೆಗಳೆಂದು ಚಾಲಕ ತಿಳಿಸಿದ. ಬೋರಪ್ಪ ಸಹಜವಾಗಿಯೇ ಗುಡ್ಡದ ದೇವತೆ (ಬೋರೆ = ಗುಡ್ಡ, ದಿಬ್ಬ); "ಹೊನ್ನರಳಮ್ಮ" ದೇವತೆ ತಿಳಿಯದು - ಆ ಹೆಸರಿನ ಮೂಲದಲ್ಲಿ ಹೊನಲು ಪದ ಇರುವಂತಿದೆ.

## ೧೩. ಹಂಪಿಯ "ಭುವನೇಶ್ವರಿ" ಯಾರು?

ಹಂಪಿಯ ಹೆಸರು ಪಂಪಾದೇವಿಯಿಂದ ನಿಷ್ಪನ್ನವಾಗಿದ್ದು ಪಂಪಾಂಬಿಕೆಯೇ ಅಲ್ಲಿನ ಪಾಲಕಿ ಅಥವಾ ರಕ್ಷಕ ದೇವತೆ (Tutelary Goddess)– ಮುಂಬೈಗೆ ಮುಂಬಾಯಿ ಅಥವಾ ಮುಂಬಾದೇವಿ, ಬೆಂಗಳೂರಿಗೆ ಹ(ಅ)ಣ್ಣಮ್ಮ, ಬೆಳಗಾವಿಗೆ ದ್ಯಾಮವ್ವ ಇದ್ದಂತೆ. ವಿರೂಪಾಕ್ಷನು ಪಂಪಾಪತಿ ಎಂದೇ ಪ್ರಸಿದ್ಧ - ಅಲ್ಲಿ ಮೊದಲು ಇದ್ದುದು ಬಹುಶಃ ಚಿಕ್ಕ ಗ್ರಾಮದೇವತೆ ಪಂಪವ್ವ - ಅವಳ ಪತಿಯಾಗಿ ವಿರೂಪಾಕ್ಷನ ಪ್ರವೇಶ ಬಹುಶಃ ಆಮೇಲೆ ಆಯ್ತು. ಅಲ್ಲಿ ಪಂಪಾ ಸರೋವರದ ದಡದಲ್ಲಿ ಕಿರಿಯ ಪಂಪಾಂಬಿಕೆ ಶಿವಲಿಂಗದ ಬಲಕ್ಕಿದ್ದಾಳೆ - ಅವಳಿನ್ನೂ ಮದುವೆಯಾಗದ ವಧು; ವಿರೂಪಾಕ್ಷ ದೇವಾಲಯದಲ್ಲಿ ಶಿವಲಿಂಗದ ಎಡಭಾಗಕ್ಕಿದ್ದಾಳೆ - ಅವಳು ವಿರೂಪಾಕ್ಷನನ್ನು ಕೈ ಹಿಡಿದ ಪತ್ನಿ - ಮದುವೆಗೆ ಮುನ್ನ ವರನ ಬಲಕ್ಕಿದ್ದ ವಧುವನ್ನು ತಾಳಿ ಕಟ್ಟಿಯಾದ ಮೇಲೆ ಪತ್ನಿಯಾದ ಅವಳನ್ನು ಪತಿಯ ಎಡಭಾಗಕ್ಕೆ ತರುತ್ತಾರೆ (ಕಿರಿಯ ಪಂಪಾಂಬಿಕೆ, ಹಿರಿಯ ಪಂಪಾಂಬಿಕೆಯರನ್ನು ನಾನು ಗುರುತಿಸಿದ್ದು ನನ್ನ ಸಂಶೋಧನೆಯ ಅಪೂರ್ವ ಅನುಭವಗಳಲ್ಲೊಂದು).

ವಿರೂಪಾಕ್ಷ ದೇವಾಲಯದ ಪಂಪಾಂಬಿಕೆ ಅವನ ಪತ್ನಿ ಸರಿ; ಆದರೆ ಅವಳ ಗರ್ಭಗುಡಿಯ ಮುಂದೆಯೇ ದಕ್ಷಿಣಾಭಿಮುಖವಾಗಿರುವ ಭುವನೇಶ್ವರಿ ಯಾರು? ಆ ಬಗ್ಗೆ ಹಂಪಿಯ ನಿವಾಸಿಗಳಿಗಾಗಲಿ ಆ ಪ್ರದೇಶದವರಿಗಾಗಲಿ ಸ್ಪಷ್ಟ ಏಕಾಭಿಪ್ರಾಯವಿಲ್ಲ. ಹಂಪಿಯ ಹರಿಹರ ಕವಿಯ ಪ್ರಕಾರ ಪಂಪಾಂಬಿಕೆ ಶಿವನು ಕೈಹಿಡಿದ ಗಿರಿಜೆ. ಮನ್ಮಥದಹನ ಮಾಡಿ ಬಳಿಕ ತನಗಾಗಿ ತಪಸ್ಸು ಮಾಡಿದ ಗಿರಿಜೆಯನ್ನು ವರಿಸಿದನೆಂಬುದು ಪ್ರಸಿದ್ಧಕತೆ - ಹಿಮವತ್ ಪರ್ವತರಾಜನ ಮಗಳು ಗಿರಿಜೆಯು ಹಂಪಿಯ ಹೇಮಕೂಟ ಪರ್ವತದ ಮೇಲೆ ಮನ್ಮಥದಹನ ಮಾಡಿದ ಶಿವನನ್ನು ಒಲಿಸಿ ಆ ಬಳಿಕ ಮದುವೆಯಾದಳು ಎಂಬುದು ಹರಿಹರನ ಕಲ್ಪನೆ. ಅ ಗಿರಿಜೆಯೇ ಹರಿಹರನ ಕಲ್ಪನೆಯಂತೆ ಪಂಪಾಂಬಿಕೆ. ಆದರೆ ಅದು ಬಹುಶಃ ಸರಿಯಲ್ಲ. ಗಿರಿಜೆ ಶಿವನ ಮೊದಲ ಪತ್ನಿ, ರಾಣಿ; ಪಂಪಾಂಬಿಕೆ ಶಿವನ ಉಪಪತ್ನಿ. ಜಾನಪದ ಕತೆಯ ಪ್ರಕಾರ ಅವಳು

ಮತಂಗಮುನಿಯ ಮಗಳು. (ಹಂಪಿಯಲ್ಲಿ ಮತಂಗ ಪರ್ವತವಿದೆ - ವಿರೂಪಾಕ್ಷ ಗುಡಿಯ ಮುಂಭಾಗದಲ್ಲಿ). ಪಂಪಾಂಬಿಕೆ, ಭುವನೇಶ್ವರಿಯರು ಭಿನ್ನ ದೇವತೆಗಳು. ಭುವನೇಶ್ವರಿ ಬಹುಶಃ ಶಿವನ ಮೊದಲ ಪತ್ನಿ ಗಿರಿಜೆ ಅಥವಾ ಪಾರ್ವತಿ. ಪಂಪಾಂಬಿಕೆ ಹಂಪಿಯಲ್ಲಿ ತಪಸ್ಸು ಮಾಡಿ ಶಿವನನ್ನು ಒಲಿಸಿ ಮದುವೆಯಾದ ಶಿವನ ಎರಡನೆಯ ಪತ್ನಿ. ಶಿವನ ಪತ್ನಿಯೂ ಹಂಪಿಯವಳೂ ಆದ ಪಂಪಾಂಬಿಕೆಯು ವಿರೂಪಾಕ್ಷನ ಎಡಭಾಗದಲ್ಲಿರುವುದು ಸ್ವಾಭಾವಿಕ. ಶಿವನ ಮೊದಲ ಪತ್ನಿ ಪಾರ್ವತಿ ಅಥವಾ ಗಿರಿಜೆಯ ಸಮ್ಮುಖದಲ್ಲಿ, ಅವಳ ಒಪ್ಪಿಗೆ ಅಥವಾ ಆಶೀರ್ವಾದ ಪಡೆದೇ ಪಂಪಾಂಬಿಕೆ ಶಿವನನ್ನು ವರಿಸಿದ್ದು ಎಂಬ ಊಹೆ ನಿಜವಾಗಿದ್ದರೆ ಅವಳ ಮೂರ್ತಿ ದಕ್ಷಣಾಭಿಮುಖವಾಗಿ ಇರುವುದು ಸ್ವಾಭಾವಿಕ. ಅವಳನ್ನು ಭುವನೇಶ್ವರಿ ಎಂದು ಕರೆದರೆ ಅದು ಅರ್ಥಪೂರ್ಣವಾದುದೇ; ಭುವನೇಶ್ವರ ಎಂದರೆ ಲೋಕದ ಒಡೆಯನಾದ ಶಿವನ ಪತ್ನಿಯೇ ಎಂಬ ವಿವರಣೆ ಸರಿಯೇ. ಆಕಸ್ಮಿಕವೆಂಬಂತೆ, ಭುವನೇಶ್ವರಿ ಗರ್ಭಗುಡಿಯ ಮುಂಭಾಗದ ನವರಂಗದಲ್ಲಿ ಭುವನೇಶ್ವರಿ ಎಂದು ವಾಸ್ತುಶಿಲ್ಪ ಶಾಸ್ತ್ರಜ್ಞರು ಕರೆಯುವ ಶಿಖರವಿದೆ (ಹೊಯ್ಸಳರ ದೇವಾಲಯಗಳಲ್ಲಿ ಅದು ಸಾಮಾನ್ಯ). ಭುವನೇಶ್ವರಿ ಶೈಲಿಯ ಗೋಪುರವನ್ನು ಹೊಂದಿರುವ ಗುಡಿಯ ದೇವತೆಯೇ ಭುವನೇಶ್ವರಿ ಎಂಬ ಹೆಸರು ಪಡೆದಿರಬಹುದೇ? (ನವರಂಗದ ಮೇಲ್ಛಾವಣಿ ಚಪ್ಪಟೆ ಆಕಾರದ್ದಾಗಿರದೆ ಒಳಗೆ ಟೊಳ್ಳಾಗಿರುವ, ಗಂಟೆಯ ಒಳಭಾಗದಂತಿರುವ ವಿನ್ಯಾಸವಿರುತ್ತದೆ. ಆ ಒಳಭಾಗದಲ್ಲಿ ಹಲವು ಸುಂದರ ಶಿಲ್ಪಗಳನ್ನು ಕೆತ್ತಿರುತ್ತಾರೆ.)

ಭುವನೇಶ್ವರಿಯು ಪಾರ್ವತಿ ಮತ್ತು ಅವಳನ್ನು ಆ ಹೆಸರಿಂದ ಕರೆಯಲು ಅವಳು ಭುವನದ ಈಶ್ವರನಾದ ಶಿವನ ಪತ್ನಿಯಾಗಿರುವುದು. ಭುವನೇಶ್ವರಿ ವಾಸ್ತುಶಿಲ್ಪ ಶೈಲಿಯೂ ಅದಕ್ಕೆ ಕಾರಣವಿರಬಹುದು - ಇದು ಅಕಸ್ಮಿಕವಿರಬಹುದು- ಏಕೆಂದರೆ ಭುವನೇಶ್ವರಿ ಎಂಬ ವಾಸ್ತು ಶೈಲಿಯ ಹೆಸರು ಪ್ರಚಲಿತವಲ್ಲ. ಆದರೂ ಮೇಲಿನ ಊಹೆಗಳನ್ನು ಓದುಗರ ಮುಂದಿಟ್ಟಿದ್ದೇನೆ - ಅವರ ಪರಿಶೀಲನೆಗೆ. ('ಭುವನೇಶ್ವರಿ' ದೇವಿಯ ಉಲ್ಲೇಖ ಹಂಪಿಯ ಶಾಸನಗಳಲ್ಲಿ ಇಲ್ಲದಿರುವುದು ನನಗೆ ಕುತೂಹಲದ ಸಂಗತಿಯಾಗಿದೆ; ಅದೊಂದು ಕಾಡುತ್ತಿರುವ ಸಮಸ್ಯೆ)

**೧೪. ಪಂಪಾಂಬಿಕೆ ಅಭಿಜ್ಞೆ : ಬೆಂಗಳೂರಿನ ಮದುವೆಯೊಂದರಲ್ಲಿ**

ಹಂಪಿಯ ಇಬ್ಬರು ಪಂಪಾಂಬಿಕೆಯರನ್ನು ಸರಿಯಾಗಿ ಗುರುತಿಸಿದ್ದನ್ನು ಹಿಂದೆ ದಾಖಲಿಸಿದ್ದೇನೆ. ಆದರೆ ವಿರೂಪಾಕ್ಷ ದೇವಾಲಯದ ದೇವಿಯು ಚಿಕ್ಕ ಹಂಪಾದೇವಿ ಎಂಬ ಊಹೆಯು ಸರಿಯಲ್ಲವೆಂದು ಅದು ಹಿರಿಯ ಪಂಪಾಂಬಿಕೆ ಎಂಬ ಅಪೂರ್ವ ಸಂಗತಿ ಹೊಳೆದದ್ದು ಬೆಂಗಳೂರಿನ ಮದುವೆಯೊಂದರಲ್ಲಿ - ಅದು ಬಹು ಅಪೂರ್ವ ಅನುಭವ.

ವಿರೂಪಾಕ್ಷದೇವಾಲಯದ ವಿರೂಪಾಕ್ಷನ ಎಡಕ್ಕೆ ಪಂಪಾಂಬಿಕೆ ಇರುವುದು ಸರಿಯಾಗಿದೆ. ಎಲ್ಲ ಪುರುಷ ದೇವತೆಗಳ ಎಡಕ್ಕೆ ಸ್ತ್ರೀ ದೇವತೆಗಳಿರುತ್ತಾರೆ; ಪತಿ, ಪತ್ನಿಯರ ಸ್ಥಾನವೂ ಅದೇ. ಆದರೆ ಪಂಪಾ ಸರೋವರದ ಶಿವಲಿಂಗದ ಬಲಕ್ಕೆ ಪಂಪಾಂಬಿಕೆ ಮೂರ್ತಿ ಇರುವುದು ಒಂದು ಒಗಟಾಗಿತ್ತು. ಎರಡು ಮೂರು ವರ್ಷಗಳ ಹಿಂದೆ ಬೆಂಗಳೂರಿನ ಮದುವೆಯೊಂದರ ಹಿಂದಿನ ದಿನದ ಆರತಕ್ಷತೆಗೆ ಹೋಗಿದ್ದಾಗ ಅಲ್ಲಿ ಗಂಡಿನ ಬಲಕ್ಕೆ ಹೆಣ್ಣನ್ನು ಕೂರಿಸಿದ್ದರು. ನನಗೆ ಇದು ಏಕೆ ಎಂದು ಗೊತ್ತಾಗಲಿಲ್ಲ. ಅಲ್ಲಿದ್ದ ಪುರೋಹಿತರನ್ನು ಕೇಳಿದಾಗ ಅವರು ಹೇಳಿದ್ದು- "ಮದುವೆಗೆ ಮುಂಚೆ ವರನ ಬಲಕ್ಕೆ ವಧು ಇದ್ದರೆ ಮದುವೆ ಆದ ಮೇಲೆ ಪತಿಯ ಎಡಕ್ಕೆ ಪತ್ನಿ ಇರುತ್ತಾಳೆ". ಇದನ್ನು ಕೇಳಿದ ತಕ್ಷಣ ನನಗೆ ಅತ್ಯಂತ ಆನಂದವಾಯಿತು. ಅದಾದ ಎರಡು ವಾರಗಳಲ್ಲಿ ಇನ್ನೊಂದು ಮದುವೆಗೆ ಹೋದಾಗ ಅಲ್ಲಿ ಧಾರಾಮುಹೂರ್ತಕ್ಕೆ ಮುನ್ನ ವರನ ಬಲಕ್ಕೆ ವಧು ಇದ್ದಳು; ತಾಳಿ ಕಟ್ಟಿಸಿ ಅವರು ಪತಿ, ಪತ್ನಿ ಆದ ಕ್ಷಣ ಪತಿಯ ಎಡಕ್ಕೆ ಪತ್ನಿಯನ್ನು ಕೂರಿಸಲಾಯ್ತು. ನನ್ನ ಊಹೆಯೂ ಖಚಿತವಾಯ್ತು: ಪಂಪಾಸರೋವರದ ಪಂಪಾಂಬಿಕೆಯು ವಧು, ವಿರೂಪಾಕ್ಷನು ವರ; ವಿರೂಪಾಕ್ಷ ದೇವಾಲಯದ ವಿರೂಪಾಕ್ಷನು ಪತಿ, ಪಂಪಾಂಬಿಕೆಯು ಪತ್ನಿ. ವಧುವಾಗಿದ್ದ ಪಂಪಾ ಸರೋವರದ ಪಂಪಾಂಬಿಕೆಯನ್ನು ಪತ್ನಿಯಾದ ಮೇಲೆ ಹಂಪೆಯ ವಿರೂಪಾಕ್ಷನ ಎಡಕ್ಕೆ ಸ್ಥಾಪಿಸಲಾಯ್ತು. ಯಾವಾಗ ಸ್ಥಾಪಿಸಲಾಯ್ತು - ತಿಳಿಯದು: ಆದರೆ ಪಂಪಾಸರೋವರವು ಪಂಪಾಂಬಿಕೆಯು ವಿರೂಪಾಕ್ಷನಿಗಾಗಿ ತಪಸ್ಸು ಮಾಡಿದ್ದ ಜಾಗ ಎಂಬ ನಂಬಿಕೆ ಇರುವುದರಿಂದ ಅದು ಅವಳ ತೌರೂರು; ಹಂಪೆ ಅವಳ ಗಂಡನ ಮನೆ. ಆದ್ದರಿಂದ ಪಂಪಾಸರೋವರದ ದಡದ ಪಂಪಾಂಬಿಕೆ ಕಿರಿಯ (ಚಿಕ್ಕ) ಪಂಪಾಂಬಿಕೆ; ಹಂಪಿಯ ಪಂಪಾಂಬಿಕೆಯು ಹಿರಿಯ ಪಂಪಾಂಬಿಕೆ ಎಂಬುದು ದೃಢವಾಯ್ತು. ಹದಿಮೂರನೇ ಶತಮಾನದ ಸೋಮರಾಜನ ಉದ್ಭಟಕಾವ್ಯದಿಂದ ಅದು ಇನ್ನೂ ದೃಢವಾಯಿತು. ಗೂರ್ಜರ ದೇಶದಿಂದ ಹಂಪಿಯ ರಾಕ್ಷಸರನ್ನು ಸಂಹರಿಸಲೋಸುಗ ಬಂದ ಉದ್ಭಟ ದೇವನು ಕುಂತಳವನ್ನು (ಬಳ್ಳಾರಿ ಜಿಲ್ಲೆ) ಪ್ರವೇಶಿಸಿ, ಪಂಪಾಸರೋವರದ ಕಿರಿಯ ಪಂಪಾದೇವಿಯ ದರ್ಶನವನ್ನು ಮಾಡಿ ತುಂಗಭದ್ರೆ ದಾಟಿ ಹಿರಿಯ ಪಂಪಾಂಬಿಕೆಯನ್ನು ದರ್ಶನ ಮಾಡುತ್ತಾನೆ.

ಅನೇಕ ಯುಗಗಳ ಹಿಂದಿನ ವಿರೂಪಾಕ್ಷ ಪಂಪಾಂಬಿಕೆಯರ ಮದುವೆಯ ಗುಟ್ಟು ರಟ್ಟಾದದ್ದು ಇಪ್ಪತ್ತೊಂದನೆ ಶತಮಾನದ ಆರಂಭದ ಮದುವೆಯೊಂದರಲ್ಲಿ ಎಂಬುದು ಒಂದು ಅಸಾಮಾನ್ಯ ಸಂಗತಿ. ಯಾವ ಸಮಸ್ಯೆಗೆ ಎಲ್ಲಿ ಯಾವ ರೀತಿಯಲ್ಲಿ ಉತ್ತರ ದೊರೆಯುತ್ತದೆ, ಹೇಳಲಾಗದು. ಮೇಲಿನದು ನನ್ನ ಅಪೂರ್ವ ಅನುಭವಗಳಲ್ಲೊಂದು.

## ೧೫. ರಾಜಧಾನಿ ಹಂಪಿಯ ಜನವಸತಿ:

ನಾವೆಲ್ಲ ಅಂದುಕೊಂಡಿರುವಂತೆ ರಾಜಧಾನಿ ಹಂಪಿಯ ಜನವಸತಿ ಪ್ರದೇಶವೆಂದರೆ ವಿರೂಪಾಕ್ಷನ ದೇವಾಲಯದಿಂದ ಕಾಮಲಾಪುರದವರೆಗಿನ ಪ್ರದೇಶ; ಮತ್ತು ಸುತ್ತ ಮುತ್ತಣ ಪ್ರದೇಶ. ಮೂರು ನಾಲ್ಕು ವರ್ಷಗಳ ಹಿಂದೆ ನಾನು ಶ್ರೀ ಮೈ. ಚ. ಜಯದೇವ್ ಜೊತೆ ಪುರಂದರ ಮಂಟಪದ ಪಕ್ಕದ ಹಿಂದೂ ದೇವಾಲಯ ಸೇರಿದಂತೆ ಹಲವನ್ನು ದರ್ಗಾಗಳನ್ನಾಗಿ ಪರಿವರ್ತಿಸಲಾಗುತ್ತಿದೆಯೆಂಬುದನ್ನು ಕೇಳಿ ಅದನ್ನು ಸ್ವತಃ ಪರಿಶೀಲಿಸಲು ಹೋಗಿದ್ದೆವು. ಹಿಂದೆ ಕಾಮಲಾಪುರದಿಂದ ವಿಠ್ಠಲದೇವಾಲಯಕ್ಕೆ ವಾಹನದಲ್ಲಿ ಭರ್‍ರೆಂದು ಹೋಗಿ ಭರ್‍ರೆಂದು ಬಂದಿದ್ದೆ - ಮಧ್ಯೆ ಇಳಿದು ಯಾವುದನ್ನೂ ಪರಿಶೀಲಿಸಿರಲಿಲ್ಲ. ಆದರೆ ಈಗ ನಾವು ಕಾಮಲಾಪುರ- ವಿಠ್ಠಲ ದೇವಾಲಯದ ಮಾರ್ಗದ ಕಣಿವೆಯಲ್ಲಿ ವಾಹನ ನಿಲ್ಲಿಸಿ ಎಡ ಪಕ್ಕದ ಹನುಮಪಾದ ಬೆಟ್ಟವನ್ನು ಹತ್ತುತ್ತಿದ್ದಂತೆ ಸಾವಿರಾರು ಚಿಕ್ಕ ಇಟ್ಟಿಗೆಯ, ಮಣ್ಣಿನ ಭಗ್ನ ಮನೆಗಳನ್ನು ಕಂಡೆವು; ಕೆಲವು ಚಿಕ್ಕ ಚಿಕ್ಕ ಭಗ್ನ ಗುಡಿಗಳು ಅಲ್ಲಿದ್ದವು; ಒಂದು ಮಸೀದಿ ಕೂಡ ಇತ್ತು. ನಾವು ಕೇಳಿದಂತೆ ಹಾಗೂ ಕಂಡಂತೆ ಅಲ್ಲಿಯ ಹಲವು ಪೂಜಾರಹಿತ ಭಗ್ನ ದೇವಾಲಯಗಳನ್ನು ಸ್ಮಾರಕಗಳನ್ನು ಹಸಿರು ಬಣ್ಣ ಬಳಿದು ಹಸಿರು ಬಾವುಟ ನೆಟ್ಟು ದರ್ಗಾಗಳನ್ನಾಗಿ ಮಾಡಲಾಗಿತ್ತು. ಬೆಟ್ಟದ ತುದಿಯಿಂದ ನೋಡಿದಾಗ ಎರಡೂ ಗುಡ್ಡಗಳಲ್ಲಿ ಮೇಲಿನಿಂದ ಕೆಳಕ್ಕೆ ಸಾವಿರಾರು ಭಗ್ನ ಮನೆಗಳಿದ್ದವು - ಅಲ್ಲಿ ಯಾರೂ ವಾಸವಾಗಿಲ್ಲದ ಕಾರಣ, ರಾತ್ರಿ ಗುಟ್ಟಾಗಿ ದರ್ಗಾಗಳನ್ನಾಗಿ ಮಾಡುವುದು ಸುಲಭವಾಗಿದೆ. ಪುರಂದರ ಮಂಟಪದ ಪಕ್ಕದ 'ಈರಣ್ಣ ಗುಡಿ'ಯನ್ನು ದರ್ಗಾ ಮಾಡಲಾಗಿತ್ತು. ನಮ್ಮ ಜೊತೆ ಬಂದಿದ್ದ ಸ್ಥಳೀಯರೊಬ್ಬರು, ಮುಸ್ಲಿಮರು ಆ ದರ್ಗಾದಲ್ಲಿ ಉರುಸ್ ನಡೆದಾಗ ಅಲ್ಲೇ ಕೋಳಿಗಳನ್ನು ಕೊಂದು ಪುರಂದರ ಮಂಟಪದಲ್ಲಿ ಬೇಯಿಸಿ ತಿನ್ನುವುದನ್ನು ತಿಳಿಸಿದಾಗ ನಾನು ಅಕ್ಷರಶಃ ಹೌಹಾರಿದೆ. "ಹೌದೇ" ಎಂದು ನಾನು ಉದ್ಗಾರ ತೆಗೆಯುತ್ತಿದ್ದಂತೆ ಸ್ಥಳೀಯರು ಮಂಟಪದ ಬಂಡೆ ಬಿರುಕಿನಲ್ಲಿದ್ದ ಕೆಲವು ಕೋಳಿ ಪುಕ್ಕಗಳನ್ನು ತೋರಿಸಿದಾಗ ಸ್ಪಷ್ಟ ಸಾಕ್ಷ್ಯಾಧಾರ ಸಿಕ್ಕು ಸಾಬೀದಂತಾಯಿತು. ಆ 'ಶೋಧ' ನನಗೆ ತೀವ್ರ ಯಾತನೆಯನ್ನು ತಂದಿತು.

ಹನುಮಪಾದದ ಬೆಟ್ಟದ ಮೇಲಿದ್ದಾಗಲೇ ಆ ಕಣಿವೆ ಪ್ರದೇಶವೇ ರಾಜಧಾನಿ ಹಂಪಿಯ ಸಾಮಾನ್ಯ ಜನ ವಾಸವಾಗಿದ್ದ ಜನವಸತಿ ಪ್ರದೇಶವೆಂಬ ಭಾವನೆ ಬಂದು ಅದೊಂದು ಹೊಸ ಶೋಧ ಎಂದು ಬಹು ಖುಷಿ ಪಟ್ಟೆ. ಅದನ್ನು ಯಾರೂ ಗಮನಿಸಿಲ್ಲ, ಗುರುತಿಸಿಲ್ಲ ಎಂಬುದನ್ನು ಹಲವು ಇತಿಹಾಸ ವಿದ್ವಾಂಸರ ಜೊತೆ ಮಾತನಾಡಿ ಖಚಿತ ಪಡಿಸಿಕೊಂಡಿದ್ದೇನೆ. ಅಂದಿನ ಹಂಪಿಯ ಪ್ರದೇಶವನ್ನು ಸ್ಥೂಲವಾಗಿ ಮೂರು

ವಿಭಾಗಗಳನ್ನಾಗಿ ವಿಭಜಿಸಬಹುದು. ೧) ವಿರೂಪಾಕ್ಷ ದೇವಾಲಯ, ಮತಂಗ ಪರ್ವತ, ಹೇಮಕೂಟ ಪರ್ವತ, ಉದ್ದಾನ ವೀರಭದ್ರನ ದೇವಾಲಯ ಪ್ರದೇಶ; ಇದು ಮುಖ್ಯವಾಗಿ ದೇವಾಲಯಗಳ, ತುಂಗಭದ್ರೆಯ ಪವಿತ್ರ ಸ್ಥಾನ. ೨) ಉದ್ದಾನ ವೀರಭದ್ರನ ದೇವಾಲಯದಿಂದ ಕಾಮಲಾಪುರದವರೆಗಿನ ಪ್ರದೇಶ ರಾಜರು, ಮಂತ್ರಿಗಳು, ಸೇನಾಪತಿ, ಹಿರಿಯ ಅಧಿಕಾರಿಗಳು, ಗಜಶಾಲೆ, ಅಶ್ವಶಾಲೆಯಿದ್ದ ಪ್ರದೇಶ - ಇದು ಆಡಳಿತವರ್ಗದ ಪ್ರದೇಶ; ೩) ಕಾಮಲಾಪುರದಿಂದ ವಿಜಯ ವಿಠ್ಠಲ ದೇವಸ್ಥಾನದ ವರೆಗಿನ ಪ್ರದೇಶ ಮುಖ್ಯವಾಗಿ ಸಾಮಾನ್ಯ ಜನ, ಸೈನಿಕರು, ಕಿರಿಯ ಅಧಿಕಾರಿಗಳು ಇದ್ದ ಪ್ರದೇಶ - ಆ ಕಣಿವೆಯಲ್ಲಿ ಸಾಮಾನ್ಯರಿಗಾಗಿ ಹನುಮಪ್ಪ, ಕರಿಯವ್ವರಂತಹ ಸಾಮಾನ್ಯ ಗ್ರಾಮದೇವತೆಗಳು, ಚಿಕ್ಕ ಚಿಕ್ಕ ಶಿವದೇವಾಲಯಗಳು ಇದ್ದುವು. ಇದೇ ಮುಖ್ಯವಾಗಿ ಪ್ರಜೆಗಳ ವಸತಿ ಪ್ರದೇಶ.

## ೧೬. "ವಿರೂಪಾಕ್ಷ ಮಹಾರಾಜ್"

ಈಚೆಗೆ ನಾನು ಹಂಪಿಗೆ ಹೋದಾಗ ವಿರೂಪಾಕ್ಷ ದೇವಾಲಯದ ಅರ್ಚಕರನ್ನು "ವಿರೂಪಾಕ್ಷನು ದೇವರು ಸರಿ, ಭಗವಂತ ಸರಿ; ವಿರೂಪಾಕ್ಷನನ್ನು ನೀವು ಏನೆಂದು ಕರೆಯುತ್ತೀರಿ?" ಎಂದು ಪ್ರಶ್ನಿಸಿದಾಗ ಅವರು ತಕ್ಷಣ ಉತ್ತರ ಹೇಳಿದ್ದು - "ವಿರೂಪಾಕ್ಷ ಮಹಾರಾಜ್"- ಇದನ್ನು ಕೇಳಿದ ತಕ್ಷಣ ನಿಜವಾಗಿಯು ಉಬ್ಬಿ ಹೋದೆ. ೧೨-೧೩ನೇ ಶತಮಾನಗಳಲ್ಲಿ "ಪಂಪಾಪುರ"ದ ರಾಜ್ಯಕ್ಕೆ ವಿರೂಪಾಕ್ಷನೇ ಒಡೆಯ, ಅದರ ಮೇಲೆ ಯಾವ ಮನುಷ್ಯರಾಜನಿಗೂ ಅಧಿಕಾರವಿಲ್ಲ ಎಂಬಂತೆ ಜನ ನಡೆದುಕೊಳ್ಳುತ್ತಿದ್ದುದನ್ನು ನಾನು ಗುರುತಿಸಿ ಈಗಾಗಲೇ ಸಂಪ್ರಬಂಧ ಬರೆದಿದ್ದೇನೆ. ವಿಜಯನಗರದ ದೊರೆಗಳು ಹಂಪಿಯಿಂದ ರಾಜರಂತೆ ಆಳಿದರೂ ಅವರು ತಮ್ಮ ರಾಜಾಜ್ಞೆಗಳನ್ನು ವಿರೂಪಾಕ್ಷನ ಹೆಸರಿನಲ್ಲಿ ಹೊರಡಿಸುತ್ತಿದ್ದರು. ಆದರೆ ಈಗಲೂ ಆ ಪ್ರದೇಶದ ಕೆಲವು ಸಂಪ್ರದಾಯಸ್ಥರು ವಿರೂಪಾಕ್ಷನನ್ನು "ಮಹಾರಾಜ್" ಎಂದು ಭಾವಿಸಿರುವುದು ನಿಜವಾಗಿಯೂ ಆಶ್ಚರ್ಯಕರ. ಹೆಚ್ಚಿಗೆ ವಿಚಾರಿಸಿದ್ದರಲ್ಲಿ, ಅಲ್ಲಿಯವರು ನನಗೆ ಅದಕ್ಕೆ ಪೂರಕವಾದ ವಿಷಯವನ್ನು ತಿಳಿಸಿದರು. ವಿರೂಪಾಕ್ಷನಿಗಾಗಲಿ ವಿದ್ಯಾರಣ್ಯ ಮಠಕ್ಕಾಗಲಿ ಜನರು ದಕ್ಷಿಣೆ ನೀಡಿದರೆ ಅದನ್ನು ಜನರು ವಿರೂಪಾಕ್ಷನಿಗೇ ಅರ್ಪಿಸಿದ್ದು, ಅದೆಲ್ಲ ತಾವು ಆ ಪ್ರದೇಶದ ವಿರೂಪಾಕ್ಷ ರಾಜನಿಗೆ ನೀಡಿದ ಕಾಣಿಕೆ ಎಂದೇ ಭಾವಿಸುತ್ತಾರೆ. (ಇದು ಎಲ್ಲರಿಗೂ ತಿಳಿಯದಿರಬಹುದು). ಒಂದು ಕಾಲದ ಐತಿಹಾಸಿಕ ಶ್ರದ್ಧೆಯು ಶತಮಾನಗಳವರೆಗೆ ಹೇಗೆ ಜಾನಪದ ನಂಬಿಕೆಯಲ್ಲಿ ಉಳಿದು ಬರುತ್ತದೆಯೆಂಬುದಕ್ಕೆ ಇದೂ ಒಂದು ಪೋಷಕ ಆಧಾರ. ೧೧-೧೨ನೇ ಶತಮಾನದಲ್ಲಿ ಹಂಪಿಯು ದೊರವದಿನಾಡಲ್ಲಿ

ಇದ್ದಿತು ಎಂದು ಶಾಸನಾಧಾರವಿದೆ. ಈಗಲೂ ದರೋಜಿಯ (=ದೊರವದಿ) ಜನರೇ ರಥೋತ್ಸವದ ಸಮಯದಲ್ಲಿ ಹಗ್ಗಕ್ಕೆ ಮೊದಲು ಕೈಹಾಕುತ್ತಾರೆ. ವಿರೂಪಾಕ್ಷನ ರಥದ ಚಕ್ರಗಳನ್ನು ಬಡಿಗೆ ಮೀಟಿ ಮುನ್ನಡೆಯಿಸುವವರು ಕಾಮಲಾಪುರದ ಬೇಡರು - ಇದು ಏನನ್ನು ಸೂಚಿಸುವುದೋ ತಿಳಿಯದು.

ದೊರವದಿ ನಾಡಲ್ಲಿ ಹಂಪಿ ಇದ್ದಿತು ಎಂಬ ಉಕ್ತಿ, 'ಪಂಪಾಪುರ'ಕ್ಕೆ ವಿರೂಪಾಕ್ಷನೇ ಒಡೆಯನೆಂಬ ನಂಬಿಕೆಗಳಿಗೆ ಪರಸ್ಪರ ವಿರೋಧವಿಲ್ಲ. ಪಂಪಾಪುರವು ದೊರವದಿ ನಾಡಲ್ಲಿದ್ದರೂ 'ಪಂಪಾಪುರದ ರಾಜ'ನು ವಿರೂಪಾಕ್ಷನೇ ಆಗಿದ್ದನು.

## ೧೭. 'ಮಗದಿರ್', 'ಮಗಳ್ದಿರ್'

ಕಾವೇರಿಯಿಂದ ಗೋದಾವರಿಯವರೆಗೆ ಒಂಬತ್ತನೇ ಶತಮಾನದಲ್ಲಿ ಕನ್ನಡನಾಡು ವ್ಯಾಪಿಸಿತ್ತು ಎಂಬ ಕವಿರಾಜಮಾರ್ಗದ ಉಕ್ತಿಗೆ ಪೂರಕವಾದ ಮಾಹಿತಿ ಸಂಗ್ರಹಿಸುತ್ತಿದ್ದೆ. ನಾಸಿಕ್ ಜಿಲ್ಲೆಯ ಹಟ್ಕಾರ್ ಕಾನಡಿ ಎಂಬ ಅಲೆಮಾರಿ ಜನಾಂಗದ ಆಡುಭಾಷೆಯ ಬಗ್ಗೆ ಶ್ರೀ ವಿಕ್ಟರ್ ಡಿಸೋಜ ಬರೆದಿರುವ ಲೇಖನವೊಂದು ನನ್ನ ಗಮನಕ್ಕೆ ಬಂದಿತು. ಆ ಭಾಷೆಯು ಕನ್ನಡ ಭಾಷೆಯ ಒಂದು ಉಪಭಾಷೆಯಾಗಿರುವುದನ್ನು ಡಿಸೋಜ ಗುರುತಿಸಿ, ಅದರ ಮಾದರಿಗಳನ್ನು ಕೊಟ್ಟಿದ್ದರು. ಆ ಮಾದರಿಗಳನ್ನು ಓದುತ್ತ ಹಟ್ಕಾರ್ ಕಾನಡಿಗಳ ಭಾಷೆಯಲ್ಲಿರುವ "ಮಗದಿರ್", "ಮಗಳ್ದಿರ್" ಎಂಬ ಪದಗಳನ್ನು ನೋಡುತ್ತಿದ್ದಂತೆ ಬೆಕ್ಕಸ ಬೆರಗಾದೆ. ಅವುಗಳ ಮಹತ್ವವನ್ನು ಅವರು ಗುರುತಿಸಿರಲಿಲ್ಲ - ಅವುಗಳಿಗೆ sons, daughters ಎಂಬರ್ಥಗಳಿರುವುದನ್ನು ಎಲ್ಲರೂ ಬಲ್ಲರು. ಆದರೆ ಅವುಗಳ ಪ್ರಾಮುಖ್ಯವನ್ನು ನಾನು ಗುರುತಿಸಿದ್ದು ನನ್ನ ಚಿಕ್ಕ, ಮಹತ್ವದ ಶೋಧಗಳಲ್ಲಿ ಒಂದು.

ಹಳಗನ್ನಡದಲ್ಲಿ child, son, daughter, daughters, sons, children ಪದಗಳಿಗೆ ಸಂವಾದಿಯಾಗಿ ಮಗು, ಮಗನ್, ಮಗಳ್, ಮಗಳ್ದಿರ್, ಮಗಂದಿರ್, ಮಕ್ಕಳ್ ಎಂಬ ಸ್ವತಂತ್ರ ಪದಗಳಿವೆ. ಆದರೆ ಮುಂದಿನ ಕನ್ನಡದಲ್ಲಿ sons, daughters ಎಂಬುದಕ್ಕೆ ಸ್ವತಂತ್ರ ಪದಗಳಿಲ್ಲ - ಗಂಡು ಮಕ್ಕಳು, ಹೆಣ್ಣು ಮಕ್ಕಳು ಎಂಬ ಪದಗಳಿವೆ; 'ಮಕ್ಕಳು' ಪದದ ಹಿಂದೆ ಗಂಡು, ಹೆಣ್ಣು ಸೇರಿಸಬೇಕು, ಈಗಿನ ಕನ್ನಡದಲ್ಲೂ ಅಷ್ಟೇ. ಆದರೆ ಹಳಗನ್ನಡದ ಮಗಂದಿರ್, ಮಗಳ್ದಿರ್ ಎಂಬ ಸ್ವತಂತ್ರ ಪದಗಳು ಈಗಲೂ ಹಟ್ಕಾರ್ ಕಾನಡಿಗಳ ಕನ್ನಡದಲ್ಲಿ ಉಳಿದುಬಂದಿರುವುದು ನನಗೆ ವಿಸ್ಮಯವನ್ನುಂಟುಮಾಡಿತು. ಮಹಾರಾಷ್ಟ್ರದ ಉತ್ತರದ ಕೊನೆಯ ಜಿಲ್ಲೆ ನಾಸಿಕ್ ಪ್ರದೇಶವು (ಅದು ಗೋದಾವರಿ ನದಿ ದಡದಲ್ಲಿದೆ) ಹಳಗನ್ನಡ ಕಾಲದಲ್ಲಿ, ಎಂದರೆ ಒಂಬತ್ತು ಹತ್ತನೇ ಶತಮಾನಗಳಲ್ಲಿ ಹಳಗನ್ನಡವನ್ನು (ಎಂದರೆ ಆ ಕಾಲದ ಸಮಕಾಲೀನ

ಕನ್ನಡವನ್ನು) ಆಡುವ ಪ್ರದೇಶವಾಗಿದ್ದಿತು. ಇದು ಒಂದು ವಿವಾದಾತೀತ ಸಾಕ್ಷಿಯಾಗಿದೆ. (Clincing evidence.)

**೨೯. "ಮೂರ್ತ್ಯಪ್ಪ, ಎಂಗಪ್ಪ ನಿನ್ನ ಮನಿಸಾ ಅನ್ನೋದು?"**

೧೯೫೭-ರ ಬೇಸಿಗೆ ರಜೆಯಲ್ಲಿ ನನ್ನ ಹಳ್ಳಿಯ ತಂದೆ ತಾಯ್ಗಳ ಊರಿಗೆ ಹೋಗಿದ್ದಾಗ ಅಲ್ಲಿನ ಒಬ್ಬ ಹೆಣ್ಣು ಮಗಳು ವಿಶ್ವಾಸದಿಂದ ಮನೆಗೆ ಕರೆದಳು. ನಾನು ಹೋಗುತ್ತಿದ್ದಂತೆ ಆಕೆ ಕೇಳಿದ್ದು- "ಎಂಗದೀ ಮೂರ್ತ್ಯಪ್ಪ?". "ಒತಂಗದೀನಿ" ಎಂದು ಉತ್ತರಿಸಿ ಚಾಪೆ ಮೇಲೆ ಕುಳಿತುಕೊಳ್ಳುತ್ತಿದ್ದಂತೆ ಆಕೆ "ಚಾ ಮಾಡ್ಲಾ" ಎಂದಳು. ಆಗ ನಾನು (ದಿ.) ಗಾಂಧೀಜಿಯವರ, ಮೈಸೂರಿನ ಗಾಂಧಿ ಸಾಹಿತ್ಯ ಸಂಘದ ಸದಸ್ಯರ ಪ್ರಭಾವಕ್ಕೆ ಒಳಗಾಗಿ ಪ್ರಕೃತಿ ಚಿಕಿತ್ಸೆ ಮಾಡಿಸಿಕೊಂಡು ಟೀ, ಕಾಫಿ ಇವುಗಳನ್ನು ಸಂಪೂರ್ಣ ಕೈಬಿಟ್ಟಿದ್ದೆ. "ಬ್ಯಾಡವ್ವಾ, ನಾನು ಚಾ ಕುಡಿಯಲ್ಲ" ಎಂದ ತಕ್ಷಣ, ಆಕೆ "ಕಾಪಿ?" ಎಂದಳು. ಕಾಫಿಯನ್ನು ಕುಡಿಯೋಲ್ಲ ಎಂದ ತಕ್ಷಣ ಆಕೆ ನಗುತ್ತ ಹೇಳಿದ್ದು- "ಮೂರ್ತ್ಯಪ್ಪ, ನೀನು ಕಾಪಿ ಕುಡಿಯಲ್ಲ, ಚಾ ಕುಡಿಯಲ್ಲ, ಎಲಡಿಕೆ ತಿನ್ನಲ್ಲ, ಬೀಡಿ ಸೇದಲ್ಲ, ಎಂಡ ಕುಡಿಯಲ್ಲ. ಅಲ್ಲಪ್ಪಾ, ನಿನ್ನನ್ನ ಎಂಗಪ್ಪಾ ಮನಿಸಾ ಅನ್ನೋದು". ನಾನು ನಕ್ಕು ಅಲ್ಲಿ ಸ್ವಲ್ಪ ಹೊತ್ತು ಮೈಸೂರಿನ ವಿಷಯ ತಿಳಿಸಿ ಹೊರಟುಬಂದೆ. ಆ ಮುಗ್ಧ ಮನಸ್ಸಿನ ಹೆಣ್ಣುಮಗಳ ಮಾತುಗಳು ನನಗೆ ಸಹಜವಾಗಿಯೇ ಹರ್ಷವನ್ನು ತಂದಿದ್ದುವು.

ಈಚೆಗೆ ಒಂದೆರಡು ವರ್ಷಗಳ ಹಿಂದೆ ಆ ಹೆಣ್ಣು ಮಗಳ ಮಾತುಗಳು ನೆನಪಿಗೆ ಬಂದವು (ಆಕೆಯ ಮುಖ ಮರೆತುಹೋಗಿದೆ). ನೆನಪಿಗೆ ಬಂದ ತಕ್ಷಣ ಆ ಮಾತಿನ ಹಿಂದಿನ ಸೂಚ್ಯರ್ಥ ಹೊಳೆದು ನಿಜವಾಗಿಯೂ ಆನಂದತುಂದಿಲನಾದೆ. ಆ ಅನಕ್ಷರಸ್ಥ ಮುಗ್ಧ ಹೆಣ್ಣಿಗೆ ದೇವರು ಎಂದರೆ ಈಶ್ವರ, ವೀರಭದ್ರ, ಕರಿಯವ್ವ, ಹನುಮಂತ, ಗಣಪತಿ, ತಿಮ್ಮಪ್ಪ ಇತ್ಯಾದಿ - ಅವೆಲ್ಲ ಮೇಲಿನ ಬೇರೆ ಲೋಕದಲ್ಲಿವೆ ಎಂಬ ನಂಬಿಕೆ ಅಷ್ಟೇ. ಅವುಗಳ ಲಕ್ಷಣ ಏನು ಎಂಬುದನ್ನು ಹೇಳಲಾರಳು. ಆದರೆ ಮೇಲಿನ ಅವಳ ಮಾತಿನಿಂದ ಅವಳ ನಿಜವಾದ ದೈವದ ಪರಿಕಲ್ಪನೆ ಏನು ಎಂಬುದು ಸೂಚಿತವಾಗುತ್ತದೆ. ಕಾಫಿ, ಟೀ, ಬೀಡಿ, ಹೆಂಡಗಳಂತಹ ದುರಭ್ಯಾಸವಿರುವವರೇ 'ಮನಿಸ'ರು; ಅವುಗಳಿಂದ ಮುಕ್ತರಾಗಿ ಶುಭ್ರ ಜೀವನವನ್ನು ನಡೆಯಿಸುವವರೇ ದೇವರುಗಳು. ಸುಳ್ಳು ಹೇಳದಿರುವುದು, ಮೋಸ ಮಾಡದಿರುವುದು, ಕೆಟ್ಟ ಮಾತುಗಳಲ್ಲಿ ಬೈಯ್ಯದಿರುವುದು ಈ ಗುಣಗಳನ್ನು ಬೇಕಾದರೆ ದೇವರ ಸ್ವಭಾವಕ್ಕೆ ಸೇರಿಸಬಹುದು. ದುರಭ್ಯಾಸಗಳುಳ್ಳವನೇ ಮನುಷ್ಯ; ಅವುಗಳಿಂದ ಮುಕ್ತನಾದವನೇ ದೇವರು. ಮನುಷ್ಯನೂ ಪ್ರಯತ್ನಪಟ್ಟರೆ ಬದುಕಿರುವಾಗಲೇ ದೈವೀಸ್ವರೂಪನಾಗಬಹುದು.

ಈ ಉದಾತ್ತ ಪರಿಕಲ್ಪನೆ ಆ ಹೆಣ್ಣು ಮಗಳ ಮನಸ್ಸಿನಲ್ಲಿ ಕೆಲಸ ಮಾಡಿದೆ ಎಂಬಲ್ಲಿ ಅನುಮಾನವಿಲ್ಲ.

ಮೇಲಿನ ಟಿಪ್ಪಣಿ ಸಂಶೋಧನೆಯಲ್ಲ ; ಅಥವಾ ಇನ್ನೊಂದು ದೃಷ್ಟಿಯಿಂದ ಸಂಶೋಧನೆ ಹೌದು. ಆದರೆ ಆ ಮಾತುಗಳ ಹಿಂದಿನ ಗೋಪ್ಯಾರ್ಥ ನನಗೆ ಹೊಳೆದಾಗ ನನಗೆ 'ಪಾಂಡಿತ್ಯರಸ'ದ ಅನುಭವವಂತೂ ಆಯಿತು.

**೧೯. ನೇಪಾಳದ ನಾನ್ಯದೇವನ (೧೧ ಶ.) ವಂಶಸ್ಥರು ಈಗಲೂ ಇದ್ದಾರೆ:**

ಇದೊಂದು ನಿಜವಾಗಿಯೂ ರೋಚಕ ಅನುಭವ. ೨೦೦೨ರಲ್ಲಿ ನಾನು ನೇಪಾಳಕ್ಕೆ ಹೋಗಿ ಅಲ್ಲಿ ಎರಡು ವಾರ ಇದ್ದು ಕರ್ನಾಟಕ - ನೇಪಾಳ ಇವುಗಳಿಗಿರುವ ಸಾಂಸ್ಕೃತಿಕ ಸಂಬಂಧವನ್ನು ಕುರಿತು ಮಾಹಿತಿ ಸಂಗ್ರಹಿಸಿದೆ. (ಮುಂದೆ ಅದು "ಕರ್ನಾಟಕ- ನೇಪಾಳ: ಸಾಂಸ್ಕೃತಿಕ ಸಂಬಂಧ" ಎಂಬ ಹೆಸರಲ್ಲಿ ಪುಸ್ತಕರೂಪವಾಗಿ ಪ್ರಕಟಗೊಂಡಿತು.) ಅಲ್ಲಿಗೆ ಹೋಗುವ ಮುನ್ನ ಬೆಂಗಳೂರಿನ ನನ್ನ ಮಿತ್ರರೊಬ್ಬರು ಬೆಂಗಳೂರು ತೌರುಮನೆಯ ಮಹಿಳೆಯೊಬ್ಬರು ಕಾಠಮಾಂಡೋದಲ್ಲಿರುವುದನ್ನು ತಿಳಿಸಿದ್ದರು. ನಾನು ಅಲ್ಲಿಗೆ ಹೋದಾಗ ಅವರಿಗೆ ದೂರವಾಣಿ ಮಾಡಿದಾಗ ಅವರು ನಾನಿರುವ ವಸತಿ ಗೃಹಕ್ಕೆ ಬರುವುದಾಗಿ ತಿಳಿಸಿದರೂ ಏನೋ ಕಾರಣದಿಂದ ಬರಲಿಲ್ಲ.

ಅಲ್ಲಿಂದ ವಾಪಸಾದ ಎರಡು ಮೂರು ವಾರಗಳಲ್ಲಿ ಮಲ್ಲೇಶ್ವರಂನಿಂದ ಶ್ರೀಮತಿ ಪದ್ಮಿನಿಯವರು ದೂರವಾಣಿ ಮಾಡಿ ನೇಪಾಳದಿಂದ ಬೆಂಗಳೂರಿಗೆ ಬಂದಿರುವುದಾಗಿ ತಿಳಿಸಿದಾಗ ನಾನು ಅವರಿಂದ ವಿಳಾಸ ತಿಳಿದುಕೊಂಡು ಹೋಗಿ ಅವರ ಜೊತೆ ಅವರ ಪತಿ ಶ್ರೀದೇವ್ ಬೈದ್ಯ ಅವರ ಜೊತೆ ಮಾತನಾಡುತ್ತ ಕುಳಿತೆ. ಪದ್ಮಿನಿಯವರಿಗೂ ನೇಪಾಳದ ಶ್ರೀದೇವ್ ಬೈದ್ಯರಿಗೂ ಪರಿಚಯವಾಗಿ ಇಬ್ಬರೂ ಮದುವೆಮಾಡಿಕೊಂಡು ಕಾಠಮಾಂಡೋ ನಗರದಲ್ಲಿ ವಾಸವಾಗಿದ್ದರು. ಶ್ರೀದೇವ್ ಬೈದ್ಯರಿಂದ ನಾನು ನೇಪಾಳದ ಜಾತಿ ವ್ಯವಸ್ಥೆ ಇತ್ಯಾದಿ ವಿಷಯ ತಿಳಿದುಕೊಂಡು, ಹನ್ನೊಂದನೇ ಶತಮಾನದಲ್ಲಿ ಕರ್ನಾಟಕದಿಂದ ನೇಪಾಳಕ್ಕೆ ಹೋಗಿ ಆಳಿದ ನಾನ್ಯದೇವನ (೧೧ ಶ.) ವಿಷಯ ತಿಳಿಸುತ್ತಿದ್ದಂತೆ, ತಮ್ಮದೂ ರಾಜಮನೆತನವೆಂದೂ ನಾವು ಕೇರಳ ಮೂಲದವರೆಂದು ಪ್ರತೀತಿಯಿದೆಯೆಂದೂ ತಿಳಿಸಿ ತಮ್ಮಲ್ಲಿದ್ದ ವಂಶವೃಕ್ಷವನ್ನು ತೋರಿಸಿದರು. ನನಗೆ ಆಶ್ಚರ್ಯವಾಗಿ ಆ ದೇವನಾಗರಿ ಲಿಪಿಯ ವಂಶವೃಕ್ಷವನ್ನು ನೋಡುತ್ತಿದ್ದಂತೆ, ಆ ವಂಶದ ಮೊದಲ ರಾಜ ಹರಿಸಿಂಹದೇವ ಎಂದು ದಾಖಲಾಗಿತ್ತು; ಅವನ ಕಾಲವನ್ನು ನೇಪಾಳಿ ಶಕೆಯಿಂದ ಕ್ರಿಸ್ತ ಶಕೆಗೆ ಪರಿವರ್ತಿಸಿ ನೋಡಿದಾಗ (ನೇಪಾಳಿ ಸಂವತ್ಸರ ೪೪೪=ಕ್ರಿ.ಶ. ೧೩೨೪) ಅದು ಕ್ರಿ.ಶ. ೧೩೨೪ಕ್ಕೆ ಸೇರುತ್ತದೆ- ಅದು ನಾನ್ಯದೇವನ ವಂಶದ ಕೊನೆಯ ರಾಜನ ಕಾಲ. ನಾನು ಅದನ್ನು ಗಮನಿಸುತ್ತಿದ್ದಂತೆ

ಅಕ್ಷರಶಃ ಉದ್ಗಾರ ತೆಗೆದೆ- "Sridev Baidya, you are originally from Karnataka; Your ancestors belong to Karnataka's Nanyadeva's family". ಅವರಂತೂ ಬೆಕ್ಕಸ ಬೆರಗಾಗಿ ಹೋದಾಗ, ನಾನು ಖುಷಿಯಲ್ಲೇ ಪದ್ಮಿನಿ ಅವರ ತಾಯಿಗೆ-" ಬೈದ್ಯ ಅವರ ಕರ್ನಾಟಕದ ವಂಶಸ್ಥರು ಹಿಂದೆ ಹೋಗಿ ನೇಪಾಳ ಗೆದ್ದು ಅದನ್ನು ಆಳಿದರು, ನಿಮ್ಮ ಮಗಳು ಶ್ರೀದೇವ್ ಬೈದ್ಯರನ್ನು ಗೆದ್ದು ಅವರನ್ನು ಆಳುತ್ತಿದ್ದಾಳೆ." ಅವರಿಗೂ ಸಂತೋಷವಾಯ್ತು, ಸಮಾಧಾನವಾಯ್ತು. ಬ್ರಾಹ್ಮಣ ಕನ್ಯೆಯಾದ ತಮ್ಮ ಮಗಳು ನೇಪಾಳದ ಯಾವುದೋ ಜಾತಿಯ ಯುವಕನನ್ನು ಮದುವೆಯಾಗಿದ್ದಾಳೆ ಎಂಬ ಒಳ ಅಸಮಾಧಾನ ಇತ್ತಂತೆ. (ಇನ್ನೊಮ್ಮೆ ಅವರ ಮನೆಗೆ ಹೋದಾಗ ನನಗೆ ತಿಳಿಸಿದ್ದು). ಮುಂದೆ ಅವರು ಇನ್ನೊಮ್ಮೆ ನೇಪಾಳದಿಂದ ಬೆಂಗಳೂರಿಗೆ ಬಂದಾಗ, ಪುರಭವನದ ಮುಂದೆ ಹಂಪಿ ಬಗ್ಗೆ ನಡೆದ ಪ್ರತಿಭಟನೆಯೊಂದರಲ್ಲಿ ಭಾಗಿಯಾಗುವಂತೆ ಮಾಡಿದೆ. ಶ್ರೀದೇವ್ ಬೈದ್ಯರ ರಾಜವಂಶಸ್ಥರು ತಮ್ಮನ್ನು "ಕರ್ನಾಟಕ ಕುಲ" ಎಂದೇ ಕರೆದುಕೊಂಡಿದ್ದರು. ಹಂಪಿಯ ವಿಜಯನಗರ ಚಕ್ರವರ್ತಿಗಳೂ ತಮ್ಮದು "ಕರ್ನಾಟಕ ವಂಶ"ದವರೆಂದೇ ಕರೆದುಕೊಂಡಿದ್ದಾರೆ. ಹಾಗೆಯೇ ನೇಪಾಳದ "ಜಂಗಂ" ಮಠವೊಂದರ ಪಕ್ಕದ ಸಂತರ ಶಿಲ್ಪಗಳು ಲಿಂಗಧಾರಿ ವೀರಶೈವರು ಎಂಬುದನ್ನು ನಾನು ತಿಳಿಸಿದಾಗ ಅಲ್ಲಿನ ಜಂಗಂ ಜನ ಅಚ್ಚರಿಪಟ್ಟರು. ಅವರಿಗೆ ಆ ಶಿಲ್ಪಗಳು ತಮ್ಮ ವಂಶಸ್ಥರ ಶಿಲ್ಪಗಳು ಎಂಬುದು ಅವರಿಗೇ ತಿಳಿದಿರಲಿಲ್ಲ.

**೨೦. "ಮಾರ್ಬಲ ತೀರ್ಥ":**

ಮೈಸೂರಿನ ಚಾಮುಂಡಿ ಬೆಟ್ಟದ ಮೇಲಿನ ಮಹಾಬಳೇಶ್ವರ ದೇವರ ಹೆಸರಿನ ಮೂಲ ಅಲ್ಲೇ ಸಮೀಪದ ಮಾರ್ಬಳ ತೀರ್ಥ ಎಂಬ ಕೊಳದಿಂದ ಅಥವಾ ಚಾಮುಂಡಿ ಬೆಟ್ಟದ ಇನ್ನೊಂದು ಹೆಸರಾದ ಮಾರ್ಬಲ ಬೆಟ್ಟದಿಂದ ಬಂದುದೆಂಬುದನ್ನು ಇತಿಹಾಸಜ್ಞರು ಬಲ್ಲರು. ಆ ಹೆಸರುಗಳು ೧೧-೧೨ನೇ ಶತಮಾನದ ಶಾಸನಗಳಲ್ಲಿ ಉಕ್ತವಾಗಿವೆ. "ಮಾರ್ಬಲ" ಹೆಸರು ನನಗೆ ಒಂದು ಒಗಟಾಗಿ ತೋರಿತ್ತು. ಒಂದು ದಿನ ಇದ್ದಕ್ಕಿದ್ದಂತೆ ಮಲಬಾರ್ ಮತ್ತು ಮುಂಬಯಿಯ ಮಲಬಾರ್ ಹಿಲ್ಸ್ ಹೆಸರುಗಳಿಗೆ ಮೂಲವಾದ ಮಲೆಬರ್ (=ಗುಡ್ಡಗಾಡಿನ ನಿವಾಸಿಗಳು) ಎಂಬುದರಿಂದ ಬಂದಿರಬಹುದೆಂಬ ಊಹೆ ಹೊಳೆಯಿತು. ಮಲೆ ಅಥವಾ ಬೆಟ್ಟದ ನಿವಾಸಿಗಳು ಮಲೆಬರ್ ಅರ್ಥಾತ್ ಇತಿಹಾಸ ಪೂರ್ವದ ಕಾಡುಜನ. ಚಾಮುಂಡಿ ಬೆಟ್ಟದ ಹಿಂದಿನ ಅಂತಹ ಕಾಡುಜನಗಳು ಗುಹೆಗಳಲ್ಲಿ ವಾಸವಾಗಿದ್ದವರಿರಬಹುದು ಎಂಬ ಸೂಚನೆಯನ್ನನುಸರಿಸಿ ಹೊರಟಾಗ ತಕ್ಷಣ ಹೈದರ್

(೧೭೭೦-೮೦) ಕಾಲದಲ್ಲಿ ಆ ಬೆಟ್ಟದ ಸಮೀಪಕ್ಕೆ ಹೋದ ಜನರನ್ನು ಬೆಟ್ಟದ ನಿವಾಸಿಗಳು ಬೆದರಿಸಿ ಮೂಗು ಕತ್ತರಿಸಿ ದೇವರಿಗೆ ಅರ್ಪಿಸಿದ್ದುದನ್ನು ಆ ಕಾಲದ ದಾಖಲೆಗಳು ದಾಖಲಿಸಿರುವುದು ನೆನಪಿಗೆ ಬಂದಿತು. ಚಾಮುಂಡಿ ಬೆಟ್ಟದಲ್ಲಿ ಹಿಂದೆ ಮಲೆಬರ್ ಜನ ಇದ್ದು, ಹೈದರಾಲಿ ಕಾಲದಲ್ಲಿ ಕಾಡು ಜನರು ಅಲ್ಲಿ ಇರದಿದ್ದರೂ ಆ ಹಿಂದಿನ ಸಂಪ್ರದಾಯವು ಸರಳವಾಗಿ ಉಳಿದುಕೊಂಡು ಬಂದಿರಬಹುದು ಎಂದೂ ಊಹೆಯನ್ನು ಮಾಡಿದೆ.

ಬೆಟ್ಟದ ಮೇಲಿನ ನಾಯಕ ಜನಾಂಗದವರ ಜೊತೆ, ಚಾಮುಂಡಿ ದೇವಾಲಯದ ಅರ್ಚಕರು, ಬೆಟ್ಟದ ಹಿಂಬದಿಯಲ್ಲಿರುವ ಜ್ವಾಲಾಮಾಲಿನೀ ತ್ರಿಪುರ ಸುಂದರಿ ಅಥವಾ ಉರಿ ಕಾತಮ್ಮನ ದೇವಾಲಯದ ಅರ್ಚಕರು ಇವರೂ ಸೇರಿದಂತೆ ಹಲವು ಜನರ ಜೊತೆ ಮಾತನಾಡಿದ ಮೇಲೆ, ಒಂದಂತೂ ಖಚಿತವಾಯಿತು–ಚಾಮುಂಡಿ ಬೆಟ್ಟ ಮತ್ತು ಸುತ್ತಮುತ್ತ ಇರುವ ದೇವತೆಗಳೆಲ್ಲ ಶಕ್ತಿ ದೇವತೆಗಳು, ರಕ್ತ ಹಿಂಸೆ ಬಲಿ ಬಯಸುವ ದೇವತೆಗಳು ಎಂಬುದು ಖಚಿತವಾಯಿತು. ಚಾಮುಂಡಿ ದೇವಿ, 'ಉರಿ'ಕಾತಮ್ಮ ಎಂಬ ಹೆಸರುಗಳೇ ಹೇಳುತ್ತವೆ - ಅವು ಮೂಲತಃ ರಕ್ತ ಬಯಸುವ ದೇವತೆಗಳು. ಈಗಲೂ ಆ ದೇವತೆಗಳಿಗೆ ಬಲಿಗಳು ನಡೆಯುತ್ತವೆ. ಇದೆಲ್ಲವೂ ಊಹೆಯನ್ನು (Guess) ಪ್ರಮೇಯದ (Hypothesis) ಮಟ್ಟಕ್ಕೆ ಏರಿಸಿದುವು. ರಕ್ತ ಬಯಸುವ ದೇವತೆಗಳ ಆರಾಧಕರಾದ ಅನಾಗರಿಕ ಕಾಡುಜನ ಮಲೆಬರು ಇದ್ದ ಪ್ರದೇಶ ಚಾಮುಂಡಿ ಬೆಟ್ಟ ಎಂಬುದನ್ನು ಸೂಚಿಸಿದವು; ಅದೇ ಕಾರಣ, ಬೆಟ್ಟಕ್ಕೆ ಮಾರ್ಬಲ ಬೆಟ್ಟ, ಮಾರ್ಬಲ ತೀರ್ಥ ಎಂಬ ಹೆಸರುಗಳು ಬಂದುದು. ಇಡೀ ಚಾಮುಂಡಿ ಬೆಟ್ಟ ಪ್ರದೇಶವು ಒಂದು ಕಾಲಕ್ಕೆ ಕಾಡು ಜನ ಇದ್ದ ಪ್ರದೇಶವಾಗಿದ್ದು, ಕ್ರಮೇಣ ಸಂಸ್ಕೃತಿಯ ಕೇಂದ್ರವಾಯಿತು - ಮೈಸೂರುನಗರ ಮುಂದೆ ಬೆಳೆದದ್ದು ಅದರ ತಪ್ಪಲಲ್ಲಿ, ಇದನ್ನು ಕುರಿತು "ಬೆಳೆದು ಬೆಳಕಾದ ಚಾಮುಂಡಿ ಬೆಟ್ಟ" ಎಂಬ ಲೇಖನವನ್ನು ಬರೆದು ಪ್ರಕಟಿಸಿದ್ದೇನೆ. ಎರಡು ಮೂರು ವಾರ ಮಲೆಬರು, ಮಾರ್ಬಲ, ಚಾಮುಂಡಿ ಬೆಟ್ಟ ಇವುಗಳ ಗುಂಗಿನಲ್ಲೇ ತನ್ಮಯನಾಗಿ ಕಳೆದೆ.

### ೨೧. "ಹನ್ಮಿಡಿ" (ಹಲ್ಮಿಡಿ) ಭೇಟಿ-ಶಿಲೆಯು ಇಷ್ಟಲಿಂಗವಾಗಿ ವಿಕಾಸ

ಕೇಕಯ ಪಲ್ಲವ ದೊರೆಗಳ ಸೈನ್ಯದ ಜೊತೆ ಕಾದಾಡಿ, ಜಯವನ್ನು ಗಳಿಸಿಕೊಡುವುದರಲ್ಲಿ ಕದಂಬ ದೊರೆಗಳಿಗೆ ಸಹಾಯ ಮಾಡಿದ ವೀರ ವಿಜಾ ಅರಸನಿಗೆ "ಬಾಳ್ಗಳ್ಚು" ಹೆಸರಿನ ವಿಶೇಷ ಗೌರವವನ್ನು (ಬಾಳ್ಗಳ್ಚು = ಯುದ್ಧವಾದ ಮೇಲೆ ವೀರನ ಶತ್ರುರಕ್ತಸಿಕ್ತ ಕತ್ತಿಯನ್ನು ರಾಜ ತಾನೇ ತೊಳೆದು ಭೂದಾನವನ್ನು ಮಾಡುವುದು) ನೀಡಿದ್ದನ್ನು ದಾಖಲಿಸಿರುವ ಹನ್ಮಿಡಿ ಶಾಸನವು (ಕ್ರಿ.ಶ. ೪೫೦) ಕನ್ನಡ ಭಾಷೆಯ

ಮೊತ್ತ ಮೊದಲ ದಾಖಲಿತ ಪೂರ್ಣಪಾಠ. ಆ ವೀರಗಲ್ಲನ್ನು ಅಲ್ಲಿಂದ ತಂದು ಬೆಂಗಳೂರಿನ ಪ್ರಾಕ್ತನ ವಸ್ತು ಸಂಗ್ರಹಾಲಯದಲ್ಲಿ ಇಡಲಾಗಿದೆ. ೧೯೬೭ರಲ್ಲಿ ಆ ಊರಿಗೇ ಹೋಗಿ ಊರ ಹೊರಗಿನ ಪ್ರದೇಶವನ್ನೆಲ್ಲ ಸಮೀಕ್ಷಿಸಿದೆ. ಅಲ್ಲಿನ ಹೊಲಗಳಲ್ಲಿ ಅಗೆದಾಗ ಲಿಂಗದ ಮೇಲೆ ಪಾದ ಇಟ್ಟಿರುವ ಬಸವನ ಚಿಕ್ಕ ಚಿಕ್ಕ ಅಂಗೈ ಅಗಲದ ಶಿಲ್ಪಗಳು ದೊರಕಿರುವುದನ್ನು ಜನರು ತೋರಿಸಿದರು. (ಬೆಂಗಳೂರಿನ ಶ್ರೇಷ್ಠ ಕನ್ನಡ ಕಾರ್ಯಕರ್ತ ಕೈ. ಚಿರಂಜೀವಿ ಆಳ್ಲ, ಅಂತಹ ಅಲ್ಲಿನ ವಿಗ್ರಹವನ್ನು ಮೊದಲೇ ತೋರಿಸಿದ್ದರು.) ಅದು ನನಗೆ ವಿಸ್ಮಯವನ್ನುಂಟುಮಾಡಿತಲ್ಲದೆ ಒಂದು ಒಗಟಾಗಿಯೂ ಪರಿಣಮಿಸಿತು. ಆ ಶೋಧ ನನ್ನಲ್ಲಿ ಚಿಂತನೆಯ ತರಂಗವನ್ನೇ ಮೂಡಿಸಿತು. ಇಂದಿನ ವೀರಶೈವದ “ಇಷ್ಟಲಿಂಗ”ದ ಬೆಳವಣಿಗೆ ಬಹುಶಃ ಹೀಗೆ:

ಗರ್ಭಗುಡಿಯಲ್ಲಿ ಲಿಂಗಮೂರ್ತಿಯ ಸ್ಥಾಪನೆ - ಅದಕ್ಕೆ ವೇದಿಕೆ, ಮೇಲೆ ಗೋಳಕ ಇರುತ್ತದೆ. ಶಿವಲಿಂಗದ ದರ್ಶನ ಮಾಡುವವರು ಆ ದೇವಾಲಯಕ್ಕೇ ಬರಬೇಕು; ಅಥವಾ ಬಯಲಲ್ಲೇ ಅದು ಇದ್ದಿರಬಹುದು - ಲಿಂಗಮೂರ್ತಿ ಅಥವಾ ನಾಲ್ಕು ಗೋಡೆಗಳ ಮಧ್ಯೆ ಶಿವಲಿಂಗ ಸ್ಥಾಪನೆಯೇ ಮೊದಲ ಹಂತ.

ದೇವಾಲಯದ ಮೂರ್ತಿಯನ್ನು ಇನ್ನೂ ಕಿರಿದುಗೊಳಿಸಿ ಅದನ್ನು ತಲೆಯ ಮೇಲೆ ಕೊಂಡೊಯ್ದು ಪೂಜಿಸಬಹುದು: ಮನೆಯಲ್ಲಿ, ಕಟ್ಟೆಯ ಮೇಲೆ ಅಥವಾ ಬಯಲಲ್ಲಿ. ೬-೭ನೇ ಶತಮಾನದಲ್ಲಿ ಆಳುತ್ತಿದ್ದ ಭಾರಶಿವ ಎಂಬ ರಾಜರು ತಲೆಯ ಮೇಲೆ ಶಿವಲಿಂಗವನ್ನು ಹೊತ್ತೊಯ್ಯುತ್ತಿದ್ದರು ಎಂದು ಹೇಳುವ ಪ್ರಾಚೀನ ದಾಖಲೆಗಳಿವೆ. - ಇದು ಎರಡನೆಯ ಹಂತ.

ತಲೆಯ ಮೇಲೆ ಹೊತ್ತು ಒಯ್ಯುವುದು ಭಾರವಾದ್ದರಿಂದ ಅದನ್ನು ಅದೇ ಆಕಾರಕ್ಕೆ ಕಿರಿದುಗೊಳಿಸಿ ಚೀಲದಲ್ಲಿ ಅಥವಾ ಪೆಟ್ಟಿಗೆಯಲ್ಲಿಟ್ಟು ತೆಗೆದುಕೊಂಡು ಹೋಗಿ ಪೂಜಿಸುವುದು, ಮತ್ತೆ ವಾಪಸ್ಸು ತಂದು ಮನೆಯಲ್ಲಿಟ್ಟು ಪೂಜಿಸುವುದು ಮೂರನೇ ಹಂತ.

ಅದನ್ನೇ ಇನ್ನೂ ಕಿರಿದುಗೊಳಿಸಿ ಎಡಕೈಯಲ್ಲಿ ಹಿಡಿದೊಯ್ಯುವುದು ಅಥವಾ ಬಟ್ಟೆಯಲ್ಲಿ ಕಟ್ಟಿ ತಲೆಗೆ ಅಥವಾ ತೋಳಿಗೆ ಕಟ್ಟಿಕೊಳ್ಳುವುದು; ಅಥವಾ ಅದನ್ನು ಕೊರಳಿಗೆ ನೇತುಹಾಕಿಕೊಳ್ಳುವುದು- ಇದೇ ಇಷ್ಟಲಿಂಗ. ಅದನ್ನು ಎಡಗೈಯಲ್ಲಿ ನಿಲ್ಲಿಸಿ ಪೂಜೆ ಮಾಡುವುದು ಕಷ್ಟವಾದ್ದರಿಂದ ಅದಕ್ಕೆ ಕಂತೆ ಕಟ್ಟಿಸಿ ಗೋಳಾಕಾರಗೊಳಿಸಿ ಪೂಜಿಸಿ ಕಟ್ಟಿಕೊಳ್ಳಲೂಬಹುದು. ಅನೇಕ ವೀರಶೈವ ಸಂತರ ಹಿಂದಿನ ವರ್ಣಚಿತ್ರಗಳಲ್ಲಿ (ಉದಾ: ಅಲ್ಲಮ, ಸಿದ್ಧಲಿಂಗಯತಿಗಳು) ಕೈಯಲ್ಲಿ ಇಷ್ಟಲಿಂಗ ಕಾಣಬಹುದು. ಅನೇಕರು ಭಾವಿಸಿರುವಂತೆ ಕೇವಲ ಗೋಳಾಕಾರವಾಗಿರುವುದೇ ಇಷ್ಟಲಿಂಗವಲ್ಲ-

ಮೇಲಿನದು ಕಂತೆ ಮಾತ್ರ: ಅದರೊಳಗೆ ಇರುವ ಗರ್ಭಗುಡಿಯ ಶಿವಲಿಂಗ ಆಕಾರದ ಬಹು ಚಿಕ್ಕ ಶಿಲಾಲಿಂಗವೇ ಇಷ್ಟಲಿಂಗ- ಅದನ್ನು ಪುಟ್ಟಲಿಂಗ ಎಂದು ಕೂಡ ಕರೆಯುತ್ತಾರೆ. ಮೇಲಿನದು ಕಂತೆ ಮಾತ್ರ. ಅದನ್ನು 'ಕಂತೆ ಬಿಗಿಯುವುದು' ಎನ್ನುತ್ತಾರೆ. "ಕಂಥೆ" (ಸಂಸ್ಕೃತ. ಕಂಥಾ) ಎಂದರೆ ಸನ್ಯಾಸಿಗಳು ಧರಿಸುವ ವಸ್ತ್ರ. ಪುಟ್ಟಲಿಂಗ ಧರಿಸುವ ವಸ್ತ್ರವೇ. ಕಂತೆ. "ಕಂತೆ ಭಿಕ್ಷ" ಎಂದರೆ ವೀರಶೈವ ಜಂಗಮರು ಭಿಕ್ಷೆ ಸಂಗ್ರಹಿಸುವ ಜೋಳಿಗೆ ಬಟ್ಟೆ. ಆ ಹಂತಗಳನ್ನು ಹೀಗೆ ಸಂಗ್ರಹಿಸಿ ಹೇಳಬಹುದು:

**ಹಂತ ೧ :** ಒಂದು ಗುಂಡುಕಲ್ಲನ್ನು ಮೊದಲು ಪೂಜಿಸುತ್ತಿದ್ದು ಅದೇ ಕ್ರಮೇಣ ಮೇಲೆ ಗುಮ್ಮಟವಾಗಿ ಕೆಳಗೆ ಪೀಠ, ಗುಮ್ಮಟದ ಮೇಲೆ ಹಾಕಿದ ನೀರು ಹರಿದು ಹೋಗುವ ಚಿಕ್ಕ ಕಾಲುವೆ ಹೊಂದಿರುವ (ಇದೇ ಪಾಣಿಪೀಠ) ಈಗಿನ ದೇವಾಲಯವ ಶಿವಲಿಂಗಮೂರ್ತಿಯಾಗಿ ವಿಕಾಸ ಹೊಂದಿತು.

**ಹಂತ ೨:** ಅದೇ ಶಿವಲಿಂಗದ ಸಂಕ್ಷಿಪ್ತ ರೂಪವನ್ನು ತಲೆ ಮೇಲೆ ಅಥವಾ ಹೆಗಲಮೇಲೆ ಹೊತ್ತು ಒಯ್ಯುವ ಚಿಕ್ಕ ಮೂರ್ತಿಗಳು ನಿರ್ಮಾಣವಾದುವು. ಜನರು ತಾವಿರುವ ಊರಿನಲ್ಲೋ ಅಥವಾ ಮನೆಯಲ್ಲೋ ಅವುಗಳನ್ನು ಸ್ಥಾಪಿಸಿ ಮೂಲ ಮೂರ್ತಿಗಳ ಹೆಸರಲ್ಲಿ ಅದನ್ನು ಪೂಜಿಸಲಾರಂಭಿಸಿದರು. ಈಗಲೂ ಕಾಶಿ, ಶ್ರೀಶೈಲ ಇಂತಹ ಕಡೆಗಳಿಂದ ಚಿಕ್ಕ ಶಿವಲಿಂಗಗಳನ್ನು ತಂದು ತಮ್ಮ ಊರಲ್ಲಿ ಅಥವಾ ಮನೆಯಲ್ಲಿಟ್ಟು ಜನ ಪೂಜಿಸುತ್ತಾರೆ. ಅವುಗಳನ್ನು ಕಾಶಿ ವಿಶ್ವೇಶ್ವರ, ಮಲ್ಲಿಕಾರ್ಜುನ ಎಂದೂ ಹೆಸರಿಸುತ್ತಾರೆ. ಕ್ರಿ.ಶ. ೫-೬ನೇ ಶತಮಾನದಲ್ಲಿ ಮಧ್ಯ ಭಾರತದಲ್ಲಿ ಆಳುತ್ತಿದ್ದ ಭಾರಶಿವ ಎಂಬ ಹೆಸರಿನ ವಂಶದ ದೊರೆಗಳು ತಲೆಯ ಮೇಲೆ ಶಿವಲಿಂಗವನ್ನು ಹೊತ್ತು ಒಯ್ಯುತ್ತಿದ್ದರೆಂಬ ದಾಖಲೆಗಳಿವೆ. ಅವುಗಳನ್ನು ವೇದಿಕೆಮೇಲೆ ಇಟ್ಟೂ ಪೂಜಿಸುತ್ತಿದ್ದರು.

**ಹಂತ ೩:** ಅಂತಹ ಶಿವಲಿಂಗವನ್ನು ಬಹು ಚಿಕ್ಕದನ್ನಾಗಿಸಿ, ಬಟ್ಟೆಯಲ್ಲಿ ಸುತ್ತಿ ಅಥವಾ ಚಿಕ್ಕ ಪೆಟ್ಟಿಗೆಯಲ್ಲಿಟ್ಟು ಒಯ್ಯುತ್ತಿದ್ದರು. ಬಟ್ಟೆಯಲ್ಲಿ ಸುತ್ತಿದ್ದನ್ನು ತಲೆಗೆ ಅಥವಾ ತೋಳಿಗೆ ಕಟ್ಟಿಕೊಳ್ಳುತ್ತಿದ್ದರು. ಹೊಕ್ಕುಳಿನ ಕೆಳ ಭಾಗವನ್ನು ಹೊರತುಪಡಿಸಿ ದೇಹದ ಇತರ ಭಾಗಗಳಿಗೆ ಅದನ್ನು ಕಟ್ಟಿಕೊಂಡರೂ ಸರಿಯೇ. ಹೊಕ್ಕುಳಿನ ಕೆಳಭಾಗ ಹಲವು ದೃಷ್ಟಿಗಳಿಂದ ಅಪವಿತ್ರ. ಆ ಶಿವಲಿಂಗಗಳನ್ನು ವೇದಿಕೆ ಮೇಲೆ ಇಟ್ಟು ಪೂಜಿಸಬಹುದಿತ್ತು ಅಥವಾ ಎಡಗೈನಲ್ಲಿ ಹಿಡಿದು ಪೂಜಿಸಬಹುದು. ಅಂಗೈ ಕೂಡ ದೇವಾಲಯದ ಪಾಣಿ ಪೀಠವನ್ನು ಹೋಲುತ್ತದೆ. ಅಕ್ಕಮಹಾದೇವಿ ಕೌಶಿಕನನ್ನು ತ್ಯಜಿಸಿ ಶ್ರೀಶೈಲಕ್ಕೆ ಹೊರಟಾಗ 'ಧವಳಾರ'ದಲ್ಲಿದ್ದ (ಸುಣ್ಣ ಬಳಿದ ಮನೆಯ ಪೂಜಾಗೃಹ) ಲಿಂಗವನ್ನು ("ಚನ್ನಮಲ್ಲಿಕಾರ್ಜುನ"ನನ್ನು) ಹಿಡಿದು ಶ್ರೀಶೈಲಕ್ಕೆ ಹೊರಟಳು ಎಂದು ಹರಿಹರನ ಮಹಾದೇವಿಯಕ್ಕನ ರಗಳೆಯಲ್ಲಿ (ಸ್ಥಳ ೬) ಹೇಳಲಾಗಿದೆ. ಇದೇ 'ಇಷ್ಟಲಿಂಗ' - 'ಇಷ್ಟ' ಎಂದರೆ ಬಯಸಿದ್ದು, ಪ್ರಿಯವಾದ್ದು, ಸ್ವಂತದ್ದು ಎಂದರ್ಥ.

**ಹಂತ ೪:** ಅಂತಹ ದೇಹದ ಮೇಲೆ ಧರಿಸಿದ್ದ ಇಷ್ಟಲಿಂಗವನ್ನು ಮಾತ್ರ ಪೂಜಿಸುವುದು ವೀರಶೈವದ ಮುಖ್ಯ ನೀತಿ. ಅದು ದೇಹದ ಮೇಲೆ ಸದಾ ಇರಬೇಕು. - ಅದನ್ನು ಕೈಲಿ ಕೂಡ ಹಿಡಿದಿರಬಹುದು. ಹಿಂದಿನ ಅನೇಕ ಶರಣರ ಶಿಲ್ಪ, ಚಿತ್ರಗಳಲ್ಲಿ ಕೈಯಲ್ಲಿ 'ಪುಟ್ಟಲಿಂಗ' ಹಿಡಿದಿರುವುದು ಕಾಣುತ್ತದೆ; ಅವು ಕಂತೆ ಬಿಗಿದಿಲ್ಲವಾದ್ದರಿಂದ ಅವು ಪುಟ್ಟ ಲಿಂಗಗಳಿಗಿಂತ ಸ್ವಲ್ಪ ದೊಡ್ಡವು - ಸುಲಭವಾಗಿ ಕೊಂಡೊಯ್ಯ-ಬಹುದಾದಂಥವು. ಬಟ್ಟೆಯಲ್ಲಿ ಸುತ್ತಿ ಹಣೆಗೋ ಕೊರಳಿಗೋ ಕಟ್ಟಿ ಕೊಂಡಿರಬಹುದು, ಅಥವಾ ಕೊರಳಲ್ಲಿ ಎದೆಮೇಲೆ, ಹೃದಯಕ್ಕೆ ತಾಕುವಂತೆ ನೇತು ಹಾಕಿರಬಹುದು. ಈ ಕೊನೆಯವೇ ಹಿಂದೆ ಮತ್ತು ಈಗ ಪ್ರಚಲಿತವಿರುವ ಇಷ್ಟಲಿಂಗ.

ಮೇಲೆ ಸ್ವಾಭಾವಿಕ ಶಿಲೆಯು ಕ್ರಮೇಣ ಇಷ್ಟಲಿಂಗವಾಗಿ ಪರಿಣಮಿಸಿದ ಭೌತಿಕ ವಿಕಾಸವನ್ನು ಮಾತ್ರ ಹೇಳಿದ್ದೇನೆ. ಆದರೆ ಅದಕ್ಕೆ ಇರುವ ಪಾವಿತ್ರ್ಯಗುಣ, ಸಾಂಕೇತಿಕಾರ್ಥವನ್ನು ವಿವರಿಸಹೋಗಿಲ್ಲ. ಒಂದು ಶಿವಲಿಂಗವನ್ನು ಮಾಡಿಸಿ ಅದನ್ನು ಗರ್ಭಗುಡಿಯಲ್ಲಿಟ್ಟು 'ಪ್ರಾಣ ಪ್ರತಿಷ್ಠಾಪನೆ' ಮಾಡಿಸಿದ ಮೇಲೆ ಅದು ಪೂಜಾರ್ಹವಾಗುತ್ತಿತ್ತು. ಆ ಪ್ರತಿಷ್ಠಾಪನೆ ಸಂದರ್ಭದಲ್ಲಿ ವೃಷಭನು ಗರ್ಭಗುಡಿಯನ್ನು ಪ್ರವೇಶಿಸುವಂತೆ ಮಾಡಿ ಅದರ ಬಲಗಾಲನ್ನು ಲಿಂಗದ ಮೇಲೆ ಇರಿಸುವ ಪದ್ಧತಿ ಹಿಂದೆ ಇತ್ತು. ಉದಾಹರಣೆಗೆ, ಸಿದ್ಧರಾಮನು ಮಲ್ಲಿಕಾರ್ಜುನನ ಭಕ್ತನಾಗಿ ಶ್ರೀಶೈಲಕ್ಕೆ ಹೋಗಿ ಅಲ್ಲಿಂದ ಒಂದು ಲಿಂಗಮೂರ್ತಿಯನ್ನು ತಂದು ಸೊನ್ನಲಿಗೆಯಲ್ಲಿ ಸ್ಥಾಪಿಸಿ ಅದನ್ನೇ ಮಲ್ಲಿಕಾರ್ಜುನ ಎಂದು ಕರೆದು, ಪ್ರಾಣಪ್ರತಿಷ್ಠೆ ಸಂದರ್ಭದಲ್ಲಿ ವೃಷಭವು ಅದರ ಮೇಲೆ ಕಾಲಿರಿಸುವಂತೆ ಮಾಡಿದನೆಂದು ರಾಘವಾಂಕನ 'ಸಿದ್ಧರಾಮ ಚಾರಿತ್ರ'ದಲ್ಲಿ ಹೇಳಿದೆ. ಅವನ ಅಂಕಿತ "ಕಪಿಲ ಸಿದ್ಧ ಮಲ್ಲಿಕಾರ್ಜುನ" ಎಂಬಲ್ಲಿ "ಕಪಿಲ"ವು ವೃಷಭ ಸೂಚಕವೆಂದು ಸಕಾರಣವಾಗಿ ಊಹಿಸಬಹುದು (ಕಪಿಲ = ಕವಿಲೆ ಅಥವಾ ಕೌಲೆತ್ತು). ಶಿವಲಿಂಗದ ಮೇಲೆ ಬಲಗಾಲೂರಿ ಕುಳಿತಿರುವ ವೃಷಭ ಮೂರ್ತಿಗಳನ್ನು ಒಂದೆರಡು ಕಡೆ ನಾನು ನೋಡಿದ್ದೇನೆ. ಆ ಶಾಸ್ತ್ರದ ಜೊತೆ ಇನ್ನೂ ಹಲವಾರು ಮಂತ್ರ ಘೋಷದಂತಹ ಶಾಸ್ತ್ರಗಳಿರುತ್ತಿದ್ದುವು.

ಇಷ್ಟಲಿಂಗವನ್ನು ನಿರ್ಮಿಸಿದ ಶಿಲೆಗಳಲ್ಲಿ ಶ್ರೀಶೈಲದ ಶಿಲೆಯೇ ಶ್ರೇಷ್ಠ ಎಂದು ಹೇಳಲಾಗಿದೆ. ಇಷ್ಟಲಿಂಗದ ಮೇಲೆ ಕಂತೆ ಬಿಗಿಯುವುದು ಒಂದು ಕ್ರಮ. ಅದನ್ನು ಗುರುವು ವಿಧ್ಯುಕ್ತವಾಗಿ ಶಿಷ್ಯನಿಗೆ ನೀಡುವ ದೀಕ್ಷೆಯೇ 'ಲಿಂಗಾಯತ'. ಹಾಗೆ ಸ್ವೀಕರಿಸುವವನೇ ಲಿಂಗಾಯತ ಎಂಬ ಅರ್ಥ ಕ್ರಮೇಣ ಪ್ರಾಪ್ತವಾಯಿತು. ಶಿವನಲ್ಲಿ ತೀವ್ರ ನಿಷ್ಠೆಯನ್ನು, 'ವೀರ' ನಿಷ್ಠೆಯನ್ನು ಹೊಂದಿದವನೇ ವೀರಶೈವ. ವೀರಶೈವನು ಶಿವನನ್ನಲ್ಲದೆ ಯಾವ ದೈವವನ್ನೂ ಆರಾಧಿಸನು; ಅದರಲ್ಲೂ ಶಿವ ಸ್ವರೂಪಿಯಾದ

ಇಷ್ಟಲಿಂಗವನ್ನು ಮಾತ್ರ ಪೂಜಿಸುತ್ತಾನೆ. ಸ್ಥಾವರ ಲಿಂಗ ಅಥವಾ ದೇವಾಲಯದ ಮೂರ್ತಿಯ ಪೂಜೆ ಶಿವನ ನೆನಹು ಇದ್ದಂತೆ; ಇಷ್ಟಲಿಂಗವು ಶಿವನ ಸಂಗ ಇದ್ದಂತೆ (ಸಂಗ= ಜೊತೆಯಲ್ಲಿರುವುದು, ಸದಾ ಸ್ಪರ್ಶವಾಗಿರುವುದು) ಎಂದು ಒಬ್ಬ ವಚನಕಾರ ಹೇಳಿ ಪ್ರಿಯಗೆ ಪ್ರಿಯಕರನ ನೆನಹಿನ ಸುಖಕ್ಕಿಂತ 'ಸಂಗಸುಖ'ವೇ ಲೇಸು ಎಂದು ಹಾಸ್ಯದ ಧ್ವನಿಯಲ್ಲಿ ವಾಸ್ತವವನ್ನು ಹೇಳಿದ್ದಾನೆ.

ಇಷ್ಟಲಿಂಗದ ಪರಿಕಲ್ಪನೆ ಬಸವಪೂರ್ವಯಗದ್ದು. ವಚನಗಳಲ್ಲಿ ಉಲ್ಲೇಖವಾಗಿರುವ ಸಂಸ್ಕೃತ ಶ್ಲೋಕಗಳಲ್ಲಿ ಇಷ್ಟಲಿಂಗದ ಉಲ್ಲೇಖವಾಗಿದೆ.

ಹನ್ನಿಡಿಯಲ್ಲಿ ದೊರಕಿದ್ದ ಲಿಂಗದ ಮೇಲೆ ಕಾಲಿಟ್ಟಿರುವ ವೃಷಭದ ಪುಟ್ಟ ವಿಗ್ರಹಗಳು ಮೇಲಿನ ಚಿಂತನೆಗೆ ಅವಕಾಶ ಮಾಡಿಕೊಟ್ಟುವು. ಶಿವನಿಗಿಂತ ಅವನ ಭಕ್ತ ವೃಷಭ ಇನ್ನೂ ಶ್ರೇಷ್ಠ ಎಂಬುದನ್ನು ಸೂಚಿಸತಕ್ಕ ಶಿಲ್ಪಗಳು ಅವು. ಅವೂ ಕೂಡ ಒಂದು ರೀತಿಯಲ್ಲಿ ಇಷ್ಟಲಿಂಗಗಳೆ!

೫ನೇ ಶತಮಾನದ "ಪಲ್ಮಡಿ" ಸ್ಥಳನಾಮವು ಮುಂದೆ ಹಲ್ಮ(ಲ್ಮಿ)ಡಿ ಆಗಿ, ಈಗ ಸ್ಥಳೀಯ ಜನರ ಬಾಯಲ್ಲಿ 'ಹನ್ಮಿ (ನುಮಿ)ಡಿ' ಆಗಿದೆ.

**೨೨. ಹಂಪಿ ವಿರೂಪಾಕ್ಷ ದೇವಾಲಯದ ಆಡಳಿತಗಾರರು ಹಿಂದೆ ವೀರಶೈವರು**

೧೯೮೫ರಲ್ಲಿ ನಾನು ಹಂಪಿಗೆ ಹೋಗಿ ಅಲ್ಲಿನ ನದಿ ದಡದ ಶಿವಾನಂದ ಯೋಗಾಶ್ರಮದ ಶ್ರೀ ಸದಾಶಿವ ಯೋಗಿಗಳ ದರ್ಶನಮಾಡಿ ಅವರ ಜೊತೆ ಮಾತನಾಡಿದೆ. ಆಗ ಅವರು ಹೇಳಿದ್ದು "(೨೦ನೇ ಶತಮಾನದ ಆರಂಭದಲ್ಲಿ, ಸು. ೧೯೨೦-೩೦ರಲ್ಲಿ) ಮಂಟಪಗಳಿಗೆ ರಾತ್ರಿ ಹುಲಿ ಚಿರತೆಗಳು ನುಗ್ಗಿ ಗಲಾಟೆ ಮಾಡುತ್ತಿದ್ದುವು. ದೇವಾಲಯದ ಹೊರಗೆ ಇದ್ದುದೇ ಆಗ ನಾಲ್ಕಾರು ಮನೆಗಳು (ಅರ್ಚಕರವು, ಕೆಲಸಗಾರರವು). ಸಂಜೆ ಆಗುತ್ತಿದ್ದಂತೆ ಆ ಮನೆಗಳ ಎಲ್ಲರೂ ಮನೆ ಬಾಗಿಲು ಮುಚ್ಚುತ್ತಿದ್ದರು. ಭಕ್ತರು ದೇವಾಲಯದ ಗೋಪುರದ ಒಳಕ್ಕೆ ಸೇರಿ ಬಾಗಿಲು ಹಾಕಿಕೊಳ್ಳುತ್ತಿದ್ದರು. ದೇವಾಲಯದ ಅರ್ಚಕರು ಜಂಗಮರಾಗಿದ್ದರು. ಆದರೆ ದೇವರಿಗೆ ಆಗಮೋಕ್ತ ಪೂಜೆ ಸಲ್ಲಬೇಕೆಂದು ಅವರನ್ನು ಬಿಡಿಸಿ ಬ್ರಾಹ್ಮಣ ಅರ್ಚಕರನ್ನು ನೇಮಿಸಿದರು" (ಎಂ. ಚಿದಾನಂದಮೂರ್ತಿ : ಕನ್ನಡಾಯಣ-ನೋಡಿ) ಹಿಂದೆ ಒಂದು ಕಾಲದಲ್ಲಿ ಹಂಪಿಯ ವಿರೂಪಾಕ್ಷನ ಅರ್ಚಕರು ಜಂಗಮ ಅಥವಾ ವೀರಶೈವ (ಲಿಂಗಾಯತ)ರಾಗಿದ್ದರು, ಮುಂದೆ ಅವರ ಜಾಗದಲ್ಲಿ ಬ್ರಾಹ್ಮಣರನ್ನು ನೇಮಿಸಲಾಯ್ತು ಎಂಬ ಜನಜನಿತ ಸಂಗತಿಗೆ ಆಧಾರಗಳಿವೆ.

೧. ಹಂಪಿ ಸಮೀಪದ ೧೩.೧೧.೧೦೩೩ರ ಸೋಮನಾಥ ದೇವಾಲಯದ ಶಾಸನದಲ್ಲಿ ಬನವಾಸಿ "ಪುರವರಾಧೀಶ್ವರ ವೀರಮಾಹೇಶ್ವರ ಕದಂಬ ಕುಳಾಭರಣಂ" ಬಿರುದಿನ, ಚಾಲುಕ್ಯ ತ್ರೈಲೋಕ್ಯ ಮಲ್ಲನ ಸಾಮಂತ ಪಂಪರಸನು ಬೆಟ್ಟದ ಸೋಮನಾಥನಿಗೆ ದತ್ತಿ ಬಿಟ್ಟುಕೊಟ್ಟ ಸಂಗತಿಯಿದೆ. (ಕೊಪ್ಪಳ ಜಿಲ್ಲೆ ಶಾಸನಗಳು. ಸಂ : ದೇವರ ಕೊಂಡಾರೆಡ್ಡಿ. ಸಂಪುಟ ೨. ೧೪೫ನೇ ಶಾಸನ) ಸೋಮನಾಥ ದೇವಾಲಯ ೧೨-೧೩ನೇ ಶತಮಾನಗಳಲ್ಲಿ ಪಂಪಾಕ್ಷೇತ್ರದ ಪಶ್ಚಿಮದ್ವಾರವೆಂದೇ ಪ್ರಸಿದ್ಧವಾಗಿದ್ದಿತು. ಮತ್ತು ಆ ಬೆಟ್ಟವು ಹಂಪಿಯ ವಿರೂಪಾಕ್ಷ ದೇವಾಲಯದ ಪಕ್ಕದಲ್ಲಿ ಹರಿಯುವ ತುಂಗಭದ್ರೆಯ ಎಡಗಡೆ ತೀರಕ್ಕೆ ಒಂದು ಕಿಲೋ ಮೀಟರ್ ದೂರದಲ್ಲಿದೆ. ಇದು ೧೧ನೇ ಶತಮಾನದ ಮಧ್ಯಭಾಗದಲ್ಲಿ ಹಂಪಿಯ ಸುತ್ತಮುತ್ತ 'ವೀರಮಾಹೇಶ್ವರ' ಅಥವಾ ವೀರಶೈವರು ಪ್ರಬಲರಾಗಿದ್ದರೆಂಬುದಕ್ಕೆ ಒಂದು ಸ್ಪಷ್ಟ ಪ್ರಬಲ ಆಧಾರ.

'ವೀರಮಾಹೇಶ್ವರ' ಎಂದರೆ 'ವೀರಶೈವ' ಎಂದೇ ಅರ್ಥ. ನೋಡಿ-ಚನ್ನ ಬಸವಣ್ಣನವರ ವಚನ (ಸಂಪುಟ. ಮ. III ೧೬೮೮)- "........." ಗುರು ಕಟಾಕ್ಷ ನಿರೀಕ್ಷಣೆಯಿಂದ ಪ್ರಾಣದ ಮೇಲೆ ಲಿಂಗಪ್ರತಿಷ್ಠೆಯ ಮಾಡಿಕೊಂಡು ಆರರಿಂದ ಮೀರಿದ ............. ವೀರಮಾಹೇಶ್ವರತ್ವಮಂ ಪಡೆದು ಮರಳಿ ತನ್ನ ಕುಲವನರಸಿದರೆ ಒಡೆದ ಮಡಕೆಯ ಓಡಿನಂತಿಹನು ಕೇಳಿರಣ್ಣಾ". ಒಬ್ಬ ವ್ಯಕ್ತಿ ಲಿಂಗಧಾರಣೆ ಮಾಡಿಕೊಂಡು 'ವೀರಮಾಹೇಶ್ವರತ್ವ' (ವೀರಶೈವತ್ವ) ಪಡೆದ ಮೇಲೆ ಅವನು ತನ್ನ ಜಾತಿಯ ಕಡೆ ತಿರುಗಿ ನೋಡಬಾರದು. ಇಂತಹ ಹಲವು ಪ್ರಯೋಗಗಳು ವಚನ ಸಾಹಿತ್ಯದಲ್ಲಿ ಮಾತ್ರವಲ್ಲದೆ ಸಂಸ್ಕೃತ ಕೃತಿಗಳಲ್ಲೂ ಇದು ಸ್ಪಷ್ಟವಾಗಿದೆ. "ವೀರಮಾಹೇಶ್ವರಾಚಾರ ಸಂಗ್ರಹ" ಎಂಬುದು ವೀರಶೈವ ತತ್ವಗಳ ನಿರೂಪಣೆಯ ಸಂಸ್ಕೃತ ಕೃತಿ.

ಇನ್ನೊಂದು ಶಾಸನಧಾರವೂ ಗಮನಾರ್ಹ. ಪಂಪಾಪುರದ ಪೂರ್ವದ್ವಾರವೆಂದೇ ಪ್ರಖ್ಯಾತವಾಗಿದ್ದ ಕಿನ್ನರೇಶ್ವರ ದೇವಾಲಯದ ಬಳಿಯ ಬುಕ್ಕ ಸಾಗರದ ೨೬. ೧೦. ೧೬೧೨ರ ತಾಮ್ರ ಪಟವೊಂದರ ಪಾಠ ಹೀಗಿದೆ - "ಶ್ರೀ ಮದ್ವೇದಾಂತೋದಿತ ವೀರಶೈವ ಸಮಯೋರ್ಜಿತ ಲಿಂಗಾಂಗ ಸಂಬಂಧ ಭಸ್ಮ ಸ್ನಾನೋದ್ಧೂಳಿತ ತ್ರಿಪುಂಡ್ರ ಧಾರಣಕ್ರಮ ವೀರಶೈವಾಗಮೋಕ್ತ......ವೀರಮಹೇಶ್ವರ ಸದಾ ಚಾ (ಸ್ತ)ವಿನ ಜೈನ ಬೌದ್ಧ ಸಾಂಖ್ಯೆಯ ಶಾಕ್ತೇಯ ಪಾಂಚರಾತ್ರಾದಿ ಪರಮತ ಭಂಜನ ಪ್ರವೀಣ ಶ್ರೀ· ನಂದಿನಾಥ ಶ್ರೀ ಭೃಂಗೀನಾಥ ವೀರಭದ್ರದೇವರ ಮುಖ್ಯವಾದ ಮಹಾಮಹತ್ತಿನೊಳಗಾದ ಹಂಪೆಯ ಸಿಂಹಾಸನದ ಪಂಚಮಠ ಪಂಚಗೃಹದೊಳಗಾದ ಬುಕ್ಕ ಸಾಗರದ ಕರಿಸಿದ್ದೇದೇವರ ಶಿಷ್ಯರಾದ ಶ್ರೀ ಕರಿಸಿದ್ಧೇದೇವರ ಶಿಷ್ಯರು ಬುಕ್ಕಸಾಗರದ

ಹಂಪೆಯ ಮಠಕ್ಕೆ ಕರ್ತರಾದಂಥಾ ಸಿದ್ಧಬಸವರಾಜ ದೇವರಿಗಂ" ಜಂಗಮಾರ್ಚನೆಗೆ ಅನ್ನದಾನಕ್ಕೆ ಕೊಟ್ಟ ದಾನದ ವಿಷಯವಿದೆ. (ಈ ತಾಮ್ರಪಟದಲ್ಲಿ ಬರುವ 'ಪಂಚಗೃಹ' 'ಪಂಚಮಠ' ಎಂಬ ಪದಗಳ ಅರ್ಥ ಸ್ಪಷ್ಟವಾಗಬೇಕಾಗಿದೆ. 'ಪಂಚಗೃಹ' ಮಠಗಳು ಬೇರೆ ಕಡೆಗೂ ಇವೆ). ಇಲ್ಲಿ ಬರುವ ಪದ ಪ್ರಯೋಗ ನೋಡಿದರೆ 'ವೀರಶೈವ' , 'ವೀರ ಮಾಹೇಶ್ವರ' ಪದಗಳು ಸಮಾನಾರ್ಥಕಗಳೆಂಬುದು ಸ್ಪಷ್ಟ. ಇಲ್ಲಿ ಉಲ್ಲೇಖವಾಗಿರುವ ಮಠದ ಮೂಲ ಸ್ಥಾಪಕ ಕರಿಸಿದ್ಧೇದೇವರ ಹೆಸರಿನ ವೀರಶೈವ ಮಠ ಈಗಲೂ ಇದೆ- (ಅದನ್ನು ಹಳ್ಳಿಯ ಜನ 'ಕರಿಸಿದ್ಧಪ್ಪ ಮಠ' ಎಂದೂ ಕರೆಯುತ್ತಾರೆ.) ಬಹು ಸ್ವಾರಸ್ಯದ ವಿಷಯವೆಂದರೆ, ಈ ತಾಮ್ರಪಟ ಬರೆದಾತ ಮಹಾ ಶ್ವೇತಾಂಬರ ಕವಿ. 'ಶ್ವೇತಾಂಬರ' ಎಂಬುದು ಜೈನ ಧರ್ಮದ ಒಂದು ಶಾಖೆ-ಅದರ ಅನುಯಾಯಿಗಳು ಹೆಚ್ಚಾಗಿ ಇರುವುದು ಉತ್ತರ ಭಾರತದಲ್ಲಿ. ಈ ತಾಮ್ರಪಟ ಬರೆದವನು ಬಹುಶಃ ಜೈನ ಅಲ್ಲ. ಅವನ ಹೆಸರಿನಲ್ಲಿ ಬಿಳಿ ಬಟ್ಟೆ ಎಂಬರ್ಥವಿದ್ದು ಅದನ್ನು ಸಂಸ್ಕೃತೀಕರಿಸಿರುವ ಸಾಧ್ಯತೆ ಹೆಚ್ಚು. (ಇದು ಕೇವಲ ಊಹೆ).

೨. ಹನ್ನೆರಡು ಹದಿಮೂರನೆ ಶತಮಾನಗಳಲ್ಲಿ ಹಂಪಿಯ ವಿರೂಪಾಕ್ಷನ ಆಪ್ತಭಕ್ತರು ಹೆಚ್ಚಾಗಿ ವೀರಶೈವರೇ ಆಗಿದ್ದರು. ಹರಿಹರ, ರಾಘವಾಂಕ ಕವಿಗಳು ಅಲ್ಲೇ ಹುಟ್ಟಿ ಬೆಳೆದವರು. (೧೨೩೦ ಕ್ರಿ.ಶ.) ಭಂಡಾರದ ಲೆಕ್ಕ ಪತ್ರ ನೋಡಿಕೊಳ್ಳಲು ಹೊಯ್ಸಳ ರಾಜನಿಂದ ನೇಮಿತನಾಗಿದ್ದ ಹರಿಹರ ತನ್ನ ಹುದ್ದೆಯನ್ನು ಬಿಟ್ಟು ದೋರಸಮುದ್ರದಿಂದ ವಾಪಸ್ ಹಂಪಿಗೆ ಬಂದಾಗ ವಿರೂಪಾಕ್ಷ ದೇವಾಲಯದ ಅಧಿಕಾರಿ ಆ ದೇವಾಲಯದ ಪಕ್ಕದ ಒಂದು "ವಾಹನಗೃಹ"ವನ್ನು (ದೇವರ ಪಲ್ಲಕ್ಕಿ ಇತ್ಯಾದಿ ಇಡುತ್ತಿದ್ದ ಜಾಗ) ಖಾಲಿ ಮಾಡಿಸಿ ಅಲ್ಲಿ ಅವನು ವಾಸವಾಗಿರಲು ಅವಕಾಶ ಮಾಡಿಕೊಡುತ್ತಾನೆ. ವಿರೂಪಾಕ್ಷ ದೇವಾಲಯದ ತೀರ ಪಕ್ಕದಲ್ಲೇ ವಾಸಿಸಲು ಅವಕಾಶ ಮಾಡಿಕೊಡಲು ಕಾರಣ ಬಹುಶಃ ಹರಿಹರನಂತೆಯೇ ಅವರು ವೀರಶೈವರಾಗಿದ್ದುದು. (ಆ "ವಾಹನಗೃಹ" ಜಾಗವನ್ನು ನಾನು ಗುರುತಿಸಿದ್ದೇನೆ).

೩. ೧೫-೧೬ನೇ ಶತಮಾನದ ವಿರೂಪಾಕ್ಷ ದೇವಾಲಯದ ಶಾಸನದ ಉಲ್ಲೇಖ ಮೇಲಿನ ಸಂಗತಿಗೆ ಸ್ಪಷ್ಟ ಆಧಾರ. ಅದರಲ್ಲಿ "ಶ್ರೀ ವಿರೂಪಾಕ್ಷದೇವರ ಸ್ಥಾನಿಕ ಲಿಂಗಣಾರಾಧ್ಯ"ನಿಗೆ ವಿರೂಪಾಕ್ಷ ಸ್ವಾಮಿಯ ನೈವೇದ್ಯಕ್ಕಾಗಿ ಭೂದಾನ ಮಾಡಲಾಗಿದೆ. "ಸ್ಥಾನಿಕ" ಎಂದರೆ ಅರ್ಚಕ ಎಂದಾಗಬಹುದು; ಅಥವಾ ದೇವಾಲಯದ ಆಡಳಿತಗಾರ ಎಂದೂ ಆಗಬಹುದು. "ಲಿಂಗಣಾರಾಧ್ಯ" ಎಂಬ ಹೆಸರು ಆತ ವೀರಶೈವ ಅಥವಾ ಆರಾಧ್ಯ ವೀರಶೈವ ಎಂಬುದನ್ನು ಸೂಚಿಸುತ್ತದೆ. (ಸು. ೧೭೨೦-೩೦ರ ಲಿಂಗಣಾರಾಧ್ಯನು ಕೇಶಿರಾಜನ ಶಬ್ದಮಣಿದರ್ಪಣಕ್ಕೆ ಬರೆದಿರುವ ವ್ಯಾಖ್ಯಾನದಲ್ಲಿ

ತನ್ನನ್ನು ಸ್ಪಷ್ಟವಾಗಿ 'ವೀರಶೈವ' ಎಂದು ಹೇಳಿಕೊಂಡಿದ್ದಾನೆ. ನೋಡಿ- "ಇದು ಕರ್ನಾಟೋಭಯ ಭಾಷಾ ವಿಶಾರದ ಶ್ರೀ ವೀರಶೈವ ಲಿಂಗಣಾರಾಧ್ಯ ವಿರಚಿತಮಪ್ಪ ಸೂತ್ರಾನ್ವಯ ರತ್ನಮಾಲೆಯೆನಿಪ ಶಬ್ದಮಣಿ ದರ್ಪಣ ವೃತ್ತಿಯೊಳ್"). ಹಂಪಿ ಸುತ್ತ ಮುತ್ತ ಈಗಲೂ ಅಲ್ಲಲ್ಲಿ ವಿರಳವಾಗಿ ವೀರಶೈವರು "ಆರಾಧ್ಯ" ಎಂಬ ಉತ್ತರಪದದ ಹೆಸರುಗಳನ್ನಿಟ್ಟುಕೊಳ್ಳುತ್ತಾರೆ. ದಕ್ಷಿಣ ಕರ್ನಾಟಕದಲ್ಲಿ "ಆರಾಧ್ಯ" ಪಂಗಡದವರು ಹೆಚ್ಚು. ೧೫೫೦ರ ಸುಮಾರಿನಲ್ಲಿ ವಿರೂಪಾಕ್ಷ ದೇವಾಲಯದ ಅರ್ಚಕರು ಅಥವಾ ದೇವಸ್ಥಾನದ ಪಾರುಪತ್ತೇಗಾರರು ವೀರಶೈವರಾಗಿದ್ದರು ಎಂಬುದು ಸ್ಪಷ್ಟ. ಈಚೆಗೆ ಸ್ಥಳೀಯರೊಬ್ಬರಿಂದ ನನಗೆ ತಿಳಿದು ಬಂದಿರುವಂತೆ ಹೇಮಕೂಟದ ಮೇಲೆ ವರ್ಷದಲ್ಲಿ ಶಿವರಾತ್ರಿಯ ದಿನ ಜನರು ದರ್ಶನ ಮಾಡುವ (ಇದು ಅರ್ಥಪೂರ್ಣ) ಮೂಲ ವಿರೂಪಾಕ್ಷನ ಅರ್ಚಕರು ಆರಾಧ್ಯರು. ಈಗ ಇಲ್ಲಿ ದೈನಂದಿನ ಪೂಜೆ ಇಲ್ಲ.

೪. ಈಗ ವಿರೂಪಾಕ್ಷನ ಅರ್ಚಕರು ಸ್ಮಾರ್ತ ಶೃಂಗೇರಿಯ ಸಂಪ್ರದಾಯದ ಬ್ರಾಹ್ಮಣರು ಆಗಿದ್ದರೂ, ೧೯೦೦ಕ್ಕಿಂತ ಹಿಂದೆ ಅರ್ಚಕರು ವೀರಶೈವರಾಗಿದ್ದರು ಎಂಬುದನ್ನು ಅಲ್ಲಿನ ಕೆಲವು ಸ್ಥಳೀಯರು, ಅರ್ಚಕರು ದೃಢಪಡಿಸಿದ್ದಾರೆ-ಹಾಗೆ ಅವರು ಹೇಳಲು ಆಧಾರ ಅವರು ಹಿಂದೆ ಜನಜನಿತ ಸಂಗತಿಯನ್ನು ಕೇಳಿದ್ದು. ಕೆಲವರು ತಮಗೆ ಗೊತ್ತಿಲ್ಲ ಎಂದಿದ್ದಾರೆ. ಕೆಲವರು ಅದಕ್ಕೆ ಆಧಾರವಿಲ್ಲ, ಬ್ರಾಹ್ಮಣರೇ ಮೊದಲಿನಿಂದ ಅರ್ಚಕರು ಎಂದೂ ಹೇಳಿದ್ದಾರೆ.

೫. ವಿಜಯನಗರ ಸಾಮ್ರಾಜ್ಯದ ಆರಂಭದಲ್ಲಿ ಹಕ್ಕ, ಬುಕ್ಕರ ರಾಜಗುರುಗಳು ಕಾಶೀ ವಿಲಾಸಿ ಕ್ರಿಯಾಶಕ್ತಿ. ಕ್ರಿಯಾಶಕ್ತಿಯು ಲಕುಲೀಶ-ಪಾಶುಪತ ಸಂಪ್ರದಾಯದ ಗುರು ಎಂಬುದು ಸ್ಪಷ್ಟ. ೧೩-೧೪ನೇ ಶತಮಾನದ ಹೊತ್ತಿಗೆ ಲಕುಲೀಶ ಶೈವ ಸಂಪ್ರದಾಯವು ವೀರಶೈವದಲ್ಲಿ ವಿಲೀನವಾಗುತ್ತ ಬಂದಿತು ಎಂಬುದನ್ನು ವಿದ್ವಾಂಸರು ಗುರುತಿಸಿದ್ದಾರೆ. ಆದ್ದರಿಂದ ವಿಜಯನಗರದ ಕಾಲದಲ್ಲಿ ವಿರೂಪಾಕ್ಷ ದೇವಾಲಯದ ಅರ್ಚಕರು ಅಥವಾ ಸ್ಥಾನಿಕರು ವೀರಶೈವರಾಗಿದ್ದರು ಎಂದು ಊಹಿಸಲು ಅವಕಾಶವಿದೆ. ವೀರಶೈವರು ಅರ್ಚಕರಾಗಿರದಿದ್ದರೂ ಕೊನೆಯ ಪಕ್ಷ ಅವರು "ಸ್ಥಾನಿಕ" ಅಥವಾ ದೇವಾಲಯದ ಪಾರುಪತ್ತೆಗಾರರು (ಆಡಳಿತಗಾರರು) ಆಗಿದ್ದರು ಎಂದು ಸ್ಪಷ್ಟವಾಗಿ ಹೇಳಬಹುದು. ('ಸ್ಥಾನ' ಅಥವಾ 'ದೇವಸ್ಥಾನ'ಕ್ಕೆ ಸಂಬಂಧಪಟ್ಟವನೇ ಸ್ಥಾನಿಕ. ಸಂಸ್ಕೃತದ-ಇಕ ಪ್ರತ್ಯಯಕ್ಕೆ ಸಂಬಂಧಪಟ್ಟವನು ಎಂಬ ಅರ್ಥ. ಉದಾ : ಕೃಷಿ-ಕೃಷಿಕ.)

೬. ನಾನು ಹಂಪಿಯ ಮತ್ತು ಆ ಪರಿಸರದ ಹತ್ತಾರು ಜನರ ಜೊತೆ ದೂರವಾಣಿ ಮೂಲಕ ಮಾತನಾಡಿದ್ದೇನೆ. ಒಂದಿಬ್ಬರು ತಮಗೆ ಏನೂ ತಿಳಿಯದೆಂದು, ಕೆಲವರು ಮೇಲೆ ನಾನು ಹೇಳಿದ ಸಂಗತಿ ಸರಿಯಲ್ಲವೆಂದು ಇನ್ನು ಕೆಲವರು "ಹೌದು

೨೦ನೇ ಶತಮಾನಕ್ಕಿಂತ ಮುಂಚೆ ಅರ್ಚಕರು ವೀರಶೈವರಾಗಿದ್ದರು" ಎಂದು ಹೇಳಿದ್ದಾರೆ. ಕನ್ನಡ ವಿಶ್ವವಿದ್ಯಾಲಯದ ಸಂಶೋಧಕ ಡಾ.ಎಸ್.ಎಸ್. ಅಂಗಡಿಯವರು ನನ್ನ ಪರವಾಗಿ ವಿರೂಪಾಕ್ಷ ದೇವಾಲಯದ ಅರ್ಚಕರನ್ನೇ ಕೇಳಿದಾಗ, ಅವರು "ವೀರಶೈವರಾಗಿದ್ದುದು ನಿಜ" ಎಂದು ಒಪ್ಪಿಕೊಂಡಿರುವುದು, ಹಂಪಿಯ ಒಬ್ಬ ಹಿರಿಯ ನಿವಾಸಿಗಳೊಬ್ಬರು ಅದನ್ನೇ ಹೇಳಿರುವುದು ಇಲ್ಲಿ ಗಮನಿಸಬೇಕಾದ ಸಂಗತಿ. ಆದರೆ ಇಷ್ಟಂತೂ ನಿಜ. ವೀರಶೈವರು ಅರ್ಚಕರಲ್ಲದಿದ್ದರೂ ಸ್ಥಾನಿಕರಾಗಿದ್ದುದನ್ನು ವೀರಶೈವರೇ ಅರ್ಚಕರಾಗಿದ್ದರು ಎಂದು ಈಗಿನವರು ವಿಸ್ತರಿಸಿ ಹೇಳಿರಬಹುದು. ಅದು ಜನಜನಿತ ಸಂಗತಿಯಾದ್ದರಿಂದ ಕಾಲದಿಂದ ಕಾಲಕ್ಕೆ ಜನರಿಂದ ಜನಕ್ಕೆ ಹರಿದು ಬಂದಾಗ ಆ ಮಾರ್ಪಾಟನ್ನು ಪಡೆದಿರುವ ಸಾಧ್ಯತೆ ಹೆಚ್ಚು. ಮತಂಗ ಪರ್ವತದ ತುದಿಯ ವೀರಭದ್ರ ದೇವಾಲಯದ ಅರ್ಚಕರು ಈಗಲೂ ವೀರಶೈವರು.

**೨೩. "ಪಂಪಾ ಸರೋವರ"ವೇ ಮೂಲ ಪಂಪಾಕ್ಷೇತ್ರ :**

ಆನೆಗೊಂದಿಯಿಂದ ಹಂಪಿ, ಕಾಮಲಾಪುರ, ಕಡ್ಡಿರಾಂಪುರದವರೆಗಿನದು ಪಂಪಾಕ್ಷೇತ್ರವಾದರೂ, ಪಂಪಾ ಸರೋವರದ ಪ್ರದೇಶವೇ ಮೂಲ ಪಂಪಾಕ್ಷೇತ್ರ ಎಂದು ಹೇಳಲು ಸೂಚನೆಗಳಿವೆ. (೧) ಪಂಪಾ ಸರೋವರದ ಹೆಸರು ವಾಲ್ಮೀಕಿ ರಾಮಾಯಣದಲ್ಲೇ ಬಂದಿದೆ (ಸುಮಾರು ಕ್ರಿ.ಪೂ. ೧೦೦೦). ಆ ಕಾಲದಲ್ಲೇ ಅದರ ದಡದಲ್ಲಿ ಪಂಪಾಂಬಿಕೆ ದೇವಿ ಇದ್ದಳು-ಪಂಪಾಸರೋವರದ ಹೆಸರು ಬಂದಿರುವುದೇ ಅದರ ದಡದ ಪಂಪಾಂಬಿಕೆಯಿಂದ. (೨) ಈ ಪಂಪಾಂಬಿಕೆಯನ್ನು ಹಿಂದೆ ಕಿರಿಯ ಪಂಪಾಂಬಿಕೆ ಎನ್ನುತ್ತಿದ್ದರು-ಕಾರಣ ಅದು ಅವಳ ತವರ್ಮನೆ ಎಂಬ ನಂಬಿಕೆ. ವಿರೂಪಾಕ್ಷನನ್ನು ಮದುವೆಯಾದ ಮೇಲೆ ಅವಳು ಹಿರಿಯ ಪಂಪಾಂಬಿಕೆ ಎನ್ನಿಸಿಕೊಂಡಳು. ಈಗಿನ ವಿರೂಪಾಕ್ಷ ದೇವಾಲಯ ಅವಳ ಗಂಡನ ಮನೆ. (೩) ಪಂಪಾಂಬಿಕೆ ವಿರೂಪಾಕ್ಷನ ಕೈ ಹಿಡಿಯಲು ತಪಸ್ಸು ಮಾಡಿದ್ದು ಈಗಿನ ಪಂಪಾ ಸರೋವರದ ದಡದಲ್ಲಿ ಎಂಬ ಜನ ಪ್ರತೀತಿ ಇದೆ. (೪) ಹಂಪಿ ಅಥವಾ ಪಂಪಾಕ್ಷೇತ್ರದ ಹೆಸರು ಬಂದಿರುವುದೇ ಪಂಪಾಂಬಿಕೆಯಿಂದ. (೫) ಹೆಣ್ಣಿನ ತೌರ್ಮನೆ ಯಾವುದೇ ಆದರೂ ಅವಳು ಪ್ರಸಿದ್ಧಳಾಗುವುದು ಗಂಡನಿಂದ, ಗಂಡನ ಪ್ರಸಿದ್ಧಿಯಿಂದ. ಇಂದು ವಿರೂಪಾಕ್ಷನೇ ಇಡೀ ಪಂಪಾಕ್ಷೇತ್ರದ ಅಧಿದೈವವಾಗಿದ್ದರೂ ಆ ಕ್ಷೇತ್ರದ ಹೆಸರಲ್ಲಿ ಪಂಪಾದೇವಿಯ ಹೆಸರಿದೆ. ಇದರ ಸೂಚ್ಯರ್ಥ ಇಷ್ಟು-ಮೂಲತಃ ಪಂಪಾ ಸರೋವರ, ಅದರ ದಡದ ಪಂಪಾಂಬಿಕೆ ಇವು ಪವಿತ್ರ ಕ್ಷೇತ್ರವಾಗಿದ್ದು, ಮುಂದೆ ಆ ಕ್ಷೇತ್ರವು ವಿಸ್ತಾರಗೊಂಡಿತು.

೨೪. "ನಕ್ಲೀಶ" (=ಲಕುಲೀಶ)

ಸುಮಾರು ಇಪ್ಪತ್ತು ವರ್ಷಗಳ ಹಿಂದೆ "Illustrated weekly of India" ವಾರಪತ್ರಿಕೆಯಲ್ಲಿ ಗೋವೆಯ ಪ್ರಸಿದ್ಧ ಮಂಗೇಶ ದೇವಾಲಯದ ಬಗ್ಗೆ ಒಂದು ಸಚಿತ್ರ ಲೇಖನ ಪ್ರಕಟವಾಗಿತ್ತು. ಆ ದೇವಾಲಯದ ಒಳಗಿನ ಶಿಲ್ಪವಿರುವ ಕಂಬದ ಮುಂದೆ ಇಬ್ಬರು ಅರ್ಚಕರು ನಿಂತಿದ್ದು, "they call themselves Naklishas" ಎಂದು ಕೆಳಗೆ ಅಚ್ಚಾಗಿತ್ತು. ಅದನ್ನು ನೋಡಿದೊಡನೆ ನನಗೆ ಅಕ್ಷರಶಃ ರೋಮಾಂಚನವಾಯ್ತು. ಕರ್ನಾಟಕದಲ್ಲಿ ಅಥವಾ ದಕ್ಷಿಣ ಭಾರತದಲ್ಲಿ ಶಿವಾರಾಧಕರೂ ದೇವಸ್ಥಾನ ವಾಸಿಗಳೂ ವಿದ್ವಾಂಸರೂ ಆಗಿದ್ದ ಲಕುಲೀಶ-ಪಾಶುಪತ ಪಂಥದ ಸನ್ಯಾಸಿಗಳು, ಅವರ ಅನುಯಾಯಿಗಳು ಇದ್ದರು. ಅವರ ಉಲ್ಲೇಖ ನೂರಾರು ಶಾಸನಗಳಲ್ಲಿ ದೊರಕುತ್ತವೆ (ನೋಡಿ-ಎಂ. ಚಿದಾನಂದಮೂರ್ತಿ : ಕನ್ನಡ ಶಾಸಗಳ ಸಾಂಸ್ಕೃತಿಕ ಅಧ್ಯಯನ. 'ಶೈವ ಧರ್ಮ' ಅಧ್ಯಾಯ). ಈಗ ಇಡೀ ಭಾರತದಿಂದ ಮರೆಯಾಗಿರುವ ಲಕುಲೀಶ ಸಂಪ್ರದಾಯದ ಹೆಸರಿನ ಅರ್ಚಕರು ಈಗಲೂ ಗೋವೆಯಲ್ಲಿ ಇರುವುದು ಇತಿಹಾಸದ ದೃಷ್ಟಿಯಿಂದ ಅತ್ಯಂತ ಮಹತ್ವದ್ದು. ಅದರ ಹಿಂದಿನ ಸಂಪ್ರದಾಯಗಳು ಈಗಲೂ ಅಲ್ಲಿ ಉಳಿದು ಬಂದಿದ್ದರೆ ಅದು ಅಧ್ಯಯನ ಯೋಗ್ಯವಾದದ್ದು. (ಹಿಂದೆ ಸೂಚಿಸಲಾಗಿದೆ.)

ಮೂರು ವರ್ಷಗಳ ಹಿಂದೆ ಗೋವೆಯ ವಾಸ್ಕೋಗೆ ಸಂತ್ರಸ್ತ ಕನ್ನಡಿಗರಿಗೆ ಧಾನ್ಯ ವಿತರಣೆ ಮಾಡಲು ಹೋದಾಗ ಮಂಗೇಶ ದೇವಾಲಯಕ್ಕೆ ಹೋಗಬೇಕೆಂದು ಅಂದುಕೊಂಡಿದ್ದರೂ ಅದು ನೆರವೇರಲಿಲ್ಲ. ಯಾರಾದರೂ ಆಸಕ್ತರು ಮಂಗೇಶ್ ದೇವಾಲಯಕ್ಕೆ ಹೋಗಿ ಕ್ಷೇತ್ರಕಾರ್ಯವನ್ನು ಮಾಡಿದರೆ ನನಗೆ ಬಹು ಸಂತೋಷವಾಗುತ್ತದೆ.

**೨೫. ಸಂಶೋಧನೆ : ಅಡುಗೆ ಮಾಡಿದಂತೆ ಅಥವಾ ವರ್ಣಚಿತ್ರ ರಚಿಸಿದಂತೆ**

ನನ್ನ ಅಥವಾ ಎಲ್ಲ ಸಂಶೋಧಕರ ಅನುಭವದಿಂದ ಹೇಳುವುದಾದರೆ ಸಂಶೋಧನೆ ಎನ್ನುವುದು ಅಡುಗೆ ಮಾಡಿದ ಹಾಗೆ. ಕಿರಾಣಿ ಅಂಗಡಿಯಲ್ಲಿ ಎಲ್ಲ ಅಡುಗೆ ಸಾಮಾನುಗಳು ದೊರಕಿದರೂ ಆ ಅಂಗಡಿಯ ಮಾಲಿಕನಿಗೆ ಅಡುಗೆ ಮಾಡುವುದು ಗೊತ್ತಿರದೇ ಇರಬಹುದು. ಏಕೆಂದರೆ ಅಡುಗೆ ಎನ್ನುವುದು ಬರೀ ಪದಾರ್ಥಗಳ ಮಿಶ್ರಣವಲ್ಲ. ಒಳ್ಳೆಯ ಅಡುಗೆಯವನಿಗೆ ಯಾವು ಯಾವುದನ್ನು ಎಷ್ಟು ಪ್ರಮಾಣದಲ್ಲಿ ಯಾವಾಗ ಬೆರಸಬೇಕು, ಎಷ್ಟು ಅದನ್ನು ಬೇಯಿಸಬೇಕು ಎಂಬುದು ತಿಳಿದಿರುತ್ತದೆ. ಅದಕ್ಕೆ ಉದಾಹರಣೆ ಬೇಕಿಲ್ಲ-ಅದು ಕಾಫಿ ಮಾಡುವುದರಿಂದ ಎಲ್ಲ ಅಡುಗೆ ಮಾಡುವುದಕ್ಕೂ ಅನ್ವಯವಾಗುತ್ತದೆ.

ಏನೋ ಓದುತ್ತಿರುವಂತೆ, ಯಾವುದನ್ನೋ ಕುರಿತು ಚಿಂತಿಸುತ್ತಿರುವಾಗ ಯಾವುದೋ ಒಂದು ಅಂಶ, ಹೊಸ ಸಂಗತಿ, ಸೂತ್ರ ಫಳಕ್ಕನೆ ಮಿಂಚುತ್ತದೆ. ಅದರ ಜಾಡು ಹಿಡಿದು ಇನ್ನಷ್ಟು ಮಾಹಿತಿ ಸಂಗ್ರಹಿಸುತ್ತಿದ್ದಂತೆ ಆ ಹೊಸ ಹೊಳಹು ತಪ್ಪಾಗಿ ಅಥವಾ ಸರಿಯಾಗಿ ಕಾಣಿಸಬಹುದು. ಈ ಬಗ್ಗೆ ಸಂಶೋಧಕ ಎಚ್ಚರ ವಹಿಸುತ್ತಾನೆ (ವಹಿಸಬೇಕು). ಹೋಳಿಗೆ, ಲಡ್ಡು, ಕಾಫಿ ಮಾಡುವಾಗ ಬೇಯಿಸುತ್ತಿರುವ ವಸ್ತುಗಳಿಗೆ ಮೆಣಸಿನಕಾಯಿ ಹಾಕಲು ಸಾಧ್ಯವೇ? ಹಾಕಿದರೆ ಏನಾಗಬಹುದು? ಹಾಗೆ ಸಂಶೋಧಕ ಆ ಬಗ್ಗೆ ಎಚ್ಚರ ವಹಿಸಬೇಕು. ತನಗೆ ಹೊಳೆದ ಹೊಳಹು ಅಥವಾ ಪ್ರಮೇಯದ ವಿರುದ್ಧವಾಗಿ ತಾನೇ ಯೋಚಿಸಿ, ಯಾವುದು ಸರಿ ಯಾವುದು ಸರಿ ಅಲ್ಲ ಎಂಬುದನ್ನು ಎಚ್ಚರಿಕೆಯಿಂದ ಪರಿಶೀಲಿಸಬೇಕು. ನೀರು, ಕಾಫಿ ಪುಡಿ, ಸಕ್ಕರೆ ಇವನ್ನು ಬೆರಸಿದರೆ ಕಾಫಿ ಆಗುವುದಿಲ್ಲ. ಯಾವಾಗ ಎಷ್ಟು ಹಾಕಬೇಕು, ಎಷ್ಟು ಬಿಸಿ ಮಾಡಬೇಕು ಎಂಬ ಅರಿವು ಇಲ್ಲದಿದ್ದರೆ ಒಳ್ಳೆಯ ಕಾಫಿ ಸಿದ್ಧವಾಗುವುದಿಲ್ಲ.

ಸಂಶೋಧನೆಯನ್ನು ಒಂದು ವರ್ಣ ಕಲಾಕೃತಿಗೂ ಹೋಲಿಸಬಹುದು. ಬಣ್ಣ, ಕುಂಚ ಯಾವುದೇ ಅಂಗಡಿಯಲ್ಲೂ ದೊರಕಬಹುದು. ಕುಂಚದಿಂದ ಬಣ್ಣ ಹಚ್ಚುವುದು ಸುಲಭ. ಆದರೆ ಒಬ್ಬ ಕಲಾವಿದ ಮಾತ್ರ ತನ್ನ ಮನಸ್ಸಿಗೆ ಹೊಳೆದದ್ದನ್ನು ಭಿತ್ತಿಯ ಮೇಲೆ ವರ್ಣಚಿತ್ರವಾಗಿ ಮೂಡಿಸಬಲ್ಲ. ಅವನು ಚಿತ್ರ ಬರೆಯುತ್ತಿದ್ದಂತೆ ಯಾವ ಬಣ್ಣ ಎಲ್ಲಿ, ಹೇಗೆ, ಎಷ್ಟು, ಯಾವ ವಿನ್ಯಾಸದಲ್ಲಿ ಎಂಬುದು ಹೊಳೆಯುತ್ತಾ ಹೋಗುತ್ತದೆ. ಒಂದು ವರ್ಣಚಿತ್ರ ಸಿದ್ಧವಾಗುತ್ತಿದ್ದಂತೆ ಅವನಿಗೇ ಅದು ಆಶ್ಚರ್ಯ ತರಬಹುದು. ಹೇಗೆ ಚಿತ್ರ ಬರೆಯಲು ನಿಮಗೆ ಸಾಧ್ಯವಾಯಿತು ಎಂಬ ಪ್ರಶ್ನೆಗೆ ಅವನಿಂದ ಉತ್ತರ ದೊರಕುವುದಿಲ್ಲ. ಸಂಶೋಧನೆಯನ್ನು ಕವನಕ್ಕೂ ಹೋಲಿಸಬಹುದು. ನಮಗೆ ಪರಿಚಿತವಿರುವ ಪದಗಳ ಮೂಲಕವೇ ಒಂದು ಕವನ ರೂಪುಗೊಂಡಿದ್ದರೂ ಕವನ ಬರೀ ಪದಗಳ ಜೋಡಣೆಯಲ್ಲ.

ಕವಿತೆ, ಚಿತ್ರಕಲೆ ಇವು ಹೇಗೆ ಸೃಜನಾತ್ಮಕವೋ (creative) ಒಂದು ಸಂಪ್ರಬಂಧವೂ ಸೃಜನಾತ್ಮಕವೇ ಎಂಬುದನ್ನು ಇಲ್ಲಿ ನಾನು ಸೂಚಿಸುತ್ತಿದ್ದೇನೆ. ಮೇಲಿನ ಅಡುಗೆ, ಚಿತ್ರ, ಕವನಗಳ ಹೋಲಿಕೆ ಬರೀ ಹೋಲಿಕೆ. ಆ ಹೋಲಿಕೆ ಎಲ್ಲವನ್ನೂ ಹೇಳುವುದಿಲ್ಲ-ಎಲ್ಲವನ್ನೂ ಮಾತಿನಲ್ಲಿ ಹೇಳಲಿಕ್ಕಾಗದು.

ಒಂದು ಚಿಕ್ಕ ಉದಾಹರಣೆ. ರಾಘವಾಂಕನ ಹರಿಶ್ಚಂದ್ರ ಕಾವ್ಯವನ್ನು ಪಾಠ ಹೇಳಿದ್ದರೂ, ಆಗ ಹೊಳೆಯದಿದ್ದುದು ಈಚೆಗೆ ಫಳಕ್ಕನೆ ಮಿಂಚಿತು. ಅದರಲ್ಲಿ ಹರಿಶ್ಚಂದ್ರನ ಒಂದು ಮಾತು ಗಮನಾರ್ಹ- "ಈ ಲೋಕದಲ್ಲಿ ಹಂಪಿ, ವಾರಣಾಸಿಗಳಿಗೆ ಯಾರೂ ಒಡೆಯರಲ್ಲ, ವಿರೂಪಾಕ್ಷ ವಿಶ್ವೇಶ್ವರರೇ ಒಡೆಯರು." ಆ ಭಾಗವನ್ನು

ಓದುತ್ತಿದ್ದಂತೆ ಹರಿಹರ ನಾಲ್ಕು ಗಡಿಗಳ ಮಧ್ಯದ ಭಾಗವಾಗಿದ್ದ ಪಂಪಾಪುರ, ಅದರ 'ಒಡೆಯ' ವಿರೂಪಾಕ್ಷನನ್ನು ಸ್ತೋತ್ರ ಮಾಡಿದ್ದು ನೆನಪಿಗೆ ಬಂದಿತು. ಕಾಶಿಗೆ ಸಂಬಂಧಿಸಿದ ಗ್ರಂಥಗಳಲ್ಲೂ ಕಾಶಿಗೆ ರಾಜ ವಿಶ್ವೇಶ್ವರ, ಅಲ್ಲಿ ಯಾವ ರಾಜರೂ ಅರಮನೆ ಕಟ್ಟಿಕೊಳ್ಳುವಂತಿರಲಿಲ್ಲ ಎಂಬ ಮಾಹಿತಿ ದೊರಕಿತು. ಯಾರೂ ಮಾನುಷ ರಾಜರ ಆಳಿಕೆಗೆ ಅವಕಾಶವಿರದಿದ್ದ ಹಂಪೆಯ ರಕ್ಷಣಾರ್ಥವಾಗಿ ಕುರುಗೋಡಿನ ದೊರೆಗಳು ತಮ್ಮ ಸೈನ್ಯವನ್ನು ಮತಂಗ ಪರ್ವತದ ಮೇಲೆ ಇಟ್ಟ ಶಾಸನ ಸಹಾಯ ಮಾಡಿತು. ಅಂತಹ ಹಂಪಿಯನ್ನು ವಿಜಯನಗರದ ದೊರೆಗಳು ತಮ್ಮ ರಾಜಧಾನಿಯಾಗಿ ಮಾಡಿಕೊಂಡರೂ, ವಿರೂಪಾಕ್ಷನನ್ನೇ ರಾಜನೆಂದೂ ತಾವು ಅವನ ಮಾನುಷ ಪ್ರತಿನಿಧಿಗಳೆಂದೂ ಭಾವಿಸಿದ್ದರು ಎಂಬುದು ಸ್ಪಷ್ಟವಾಯಿತು-ವಿಜಯನಗರ ದೊರೆಗಳು ತಮ್ಮ ರಾಜಾಜ್ಞೆಗಳನ್ನು ವಿರೂಪಾಕ್ಷನ ಹೆಸರಲ್ಲಿ ಹೊರಡಿಸುತ್ತಿದ್ದರು. ಅವರಿಗೆ ಅಲ್ಲಿ ರಾಜ್ಯ ಸ್ಥಾಪನೆ ಮಾಡಲು ಜನತೆ ಒಪ್ಪಿಗೆ ಕೊಡಲು ಕಾರಣ-ಹಿಂದೂ ಧರ್ಮದ ಅವನತಿಯನ್ನು ತಡೆಯಲು ಅವಶ್ಯವಾಗಿ ಬೇಕಾಗಿದ್ದ ರಾಜ್ಯ ಸ್ಥಾಪನೆ. ಇಡೀ ಚಿತ್ರ ನನಗೆ ಇಟಲಿಯ ರಾಜಧಾನಿ ರೋಮ್ ನಗರದ ಬಡಾವಣೆಯಂತಿರುವ ವ್ಯಾಟಿಕನ್ ಪ್ರದೇಶಕ್ಕೆ ಪೋಪನೇ ಸರ್ವತಂತ್ರ ಸ್ವತಂತ್ರ ಚಕ್ರವರ್ತಿಯೆಂಬುದನ್ನು ಇಟಲಿ ಸರ್ಕಾರ ಒಪ್ಪಿರುವುದನ್ನು ನೆನಪಿಗೆ ತಂದಿತು. ಈಚೆಗೆ ನಾನು ಹಂಪೆಯ ಅರ್ಚಕರನ್ನು ಕೇಳಿದಾಗ ಅವರು ವಿರೂಪಾಕ್ಷನನ್ನು ತಾವು "ಮಹಾರಾಜ್" ಎಂದು ಕರೆಯುವುದಾಗಿ ಹೇಳಿದ್ದು ಮೇಲಿನ ಸಂಗತಿಗೆ ಪುಷ್ಟಿ ಒದಗಿಸಿತು.

ಇದು ಚರಿತ್ರೆಯ ಮೇಲೆ ಮಾತ್ರವಲ್ಲ, ಸಾಹಿತ್ಯದ ಮೇಲೂ ಹೊಸ ಬೆಳಕು ಬೀಳಿಸುತ್ತದೆ. ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ "ರಾಜರನ್ನು ಮನುಷ್ಯರನ್ನು ಹೊಗಳಬೇಡಿ, ದೈವವನ್ನು (ಪಂಪಾ ವಿರೂಪಾಕ್ಷನನ್ನು) ಮಾತ್ರ ಸ್ತೋತ್ರಮಾಡಿ" ಎಂದು ಹರಿಹರ ಘೋಷಿಸಿದ್ದು ಅಪೂರ್ವ. ಆ ಧೈರ್ಯ ಅವನಿಗೆ ಬರಲು ಕಾರಣ ಸ್ಪಷ್ಟವಾಗಿದೆ. ಅವನು ಇದ್ದ ಹಂಪಿಯಲ್ಲಿ ಆಗ ಯಾವ ರಾಜರೂ ಆಳುತ್ತಿರಲಿಲ್ಲ-ವಿರೂಪಾಕ್ಷನೇ ಆ ಐದು ಆರುನೂರು ಕಿಲೋಮೀಟರ್ ಪ್ರದೇಶದ ಪಂಪಾಪುರಕ್ಕೆ ಒಡೆಯ.

ಹೀಗೆ ಬೇರೆ ಬೇರೆ ಸಂಗತಿಗಳು ಸೇರಿ, ಹೆಣೆದು ಹಂಪಿಯ ಮೇಲೆ ಹೊಸ ಬೆಳಕನ್ನು ಬೀರುತ್ತವೆ. (ಆ ಬಗ್ಗೆ ಸದ್ಯದಲ್ಲೇ ನನ್ನ ಕಿರುಕೃತಿ ಪ್ರಕಟವಾಗಲಿದೆ.)

**೨೬. ಈಗಲೂ ಕಿತ್ತೂರು ಚನ್ನಮ್ಮನ ವಂಶಸ್ಥರು :**

"ಭಾರತ ಸ್ವಾತಂತ್ರ್ಯ ಸಂಗ್ರಾಮದ ಅರುಣೋದಯ" ಎಂದೇ ಪ್ರಖ್ಯಾತಳಾಗಿರುವ ಕಿತ್ತೂರು ರಾಣಿ ಚನ್ನಮ್ಮನ (೧೭೭೮-೧೮೨೯) ವಂಶಸ್ಥರು ಈಗಲೂ ಬೆಳಗಾವಿ ಜಿಲ್ಲೆಯಲ್ಲಿರುವುದು ಜನಸಾಮಾನ್ಯರಿಗಾಗಲಿ, ಉತ್ತರ ಕರ್ನಾಟಕ ದಕ್ಷಿಣ ಕರ್ನಾಟಕಗಳ

ಇತಿಹಾಸಕಾರರಿಗೇ ಆಗಲಿ ತಿಳಿಯದು. ಅವರು ಈಚೆಗೆ ಬೆಂಗಳೂರಿನ ನನ್ನ ಮನೆಗೆ ಬಂದು ಚನ್ನಮ್ಮನ ಸ್ಮಾರಕಗಳ ಸಂರಕ್ಷಣೆ, ಅವರಿಗೆ ಕಿತ್ತೂರು ಉತ್ಸವದಲ್ಲಿ ಸ್ಥಾನವನ್ನು ಕೊಡದೆ ಉದಾಸೀನ ಮಾಡಿರುವುದರ ಬಗ್ಗೆ ತಮ್ಮ ನೋವು–ಇವುಗಳನ್ನು ತಿಳಿಸಿದಾಗಲೇ ನನಗೆ ಅವರಿರುವುದು ತಿಳಿದದ್ದು. ಚನ್ನಮ್ಮನ ಆರನೇ ತಲೆಮಾರಿನ ವಿಶ್ವನಾಥ ಮಲ್ಲಪ್ಪಾ ದೇಸಾಯಿ ಕಿತ್ತೂರುಕರ (ವಯಸ್ಸು ೭೦), ಅವರ ಮಗ ಸೋಮಶೇಖರಪ್ಪ, ಅವರ ಅಣ್ಣನ ಮಗ ಉದಯ ಬಾಳಾಸಾಹೇಬ್ ದೇಸಾಯಿ ಇವರು ಈಗ ಖಾನಾಪುರದಲ್ಲಿದ್ದಾರೆ; ಇನ್ನು ಕೆಲವರು ಕೊಲ್ಲಾಪುರ, ಗಡ ಹಿಂಗ್ಲಜದಲ್ಲಿದ್ದಾರೆ. ಈ ಅಪೂರ್ವ ಸಂಗತಿಯಲ್ಲದೆ, ಸಂಗೊಳ್ಳಿ ರಾಯಣ್ಣನ ಖಡ್ಗ, ಅಮಟೂರು ಬಾಳಪ್ಪನ ಬಂದೂಕು, ಕಿತ್ತೂರು ರಾಣಿ ಚೆನ್ನಮ್ಮನು ಬ್ರಿಟಿಷ್‌ರೊಡನೆ ನಡೆಸಿದ ವ್ಯವಹಾರದ ಪತ್ರಗಳು ಇತ್ಯಾದಿ ಲಂಡನ್ ಮ್ಯೂಜಿಯಮ್ಮಿನಲ್ಲಿರುವುದೂ ತಿಳಿಯಿತು. ಇಷ್ಟನ್ನು ಇಲ್ಲಿ ಕೇವಲ ದಾಖಲಿಸುತ್ತಿದ್ದೇನೆ. ಅವಳ ವಂಶಸ್ಥರು ರಾಣಿ ಚನ್ನಮ್ಮನ ವಂಶವೃಕ್ಷವನ್ನು ನೀಡಿದ್ದಾರೆ. ಅವಳ ತೌರ್ಮನೆ ಬೆಳಗಾವಿ ಜಿಲ್ಲೆಯ ಕಾಕತಿಯಲ್ಲಿ ಅವಳ ತೌರ್ಮನೆ ವಂಶಸ್ಥರು ಇರುವುದನ್ನು ಅವರೇ ದೂರವಾಣಿ ಮಾಡಿ ನನಗೆ ತಿಳಿಸಿದ್ದಾರೆ. ಅವರೂ 'ದೇಸಾಯಿ'ಗಳೇ. ಈಚೆಗೆ ಧಾರವಾಡದ ಡಾ. ಚನ್ನಕ್ಕ ಪಾವಟೆಯವರು ಕಾಕತಿ ವಂಶಸ್ಥರ ಬಳಿ ಇರುವ ೧೯೦೯ರ ವಿವಾಹಮಹೋತ್ಸವ ಆಹ್ವಾನ ಪತ್ರಿಕೆ, ವಂಶವೃಕ್ಷ ಇತ್ಯಾದಿ ಕಳುಹಿಸಿದ್ದಾರೆ. ಅವುಗಳಲ್ಲಿ ಮಲ್ಲಸರ್ಜ ದೇಸಾಯಿ, ನಿರ್ಮಲಾ ರಾಣಿ ಇತ್ಯಾದಿ ವ್ಯಕ್ತಿನಾಮಗಳಿರುವುದು ಗಮನಾರ್ಹ.

**೨೭. ಅಂಜನ ಶಲಾಕೆ :**

ಗುರುರ್ಬ್ರಹ್ಮಾ ಗುರುರ್ವಿಷ್ಣುರ್ಗುರುರ್ದೇವೋ ಮಹೇಶ್ವರಃ ।
ಗುರುಸ್ಸಾಕ್ಷಾತ್ ಪರಬ್ರಹ್ಮ ತಸ್ಮೈ ಶ್ರೀಗುರವೇ ನಮಃ ॥

ಅಜ್ಞಾನತಿಮಿರಾಂಧಸ್ಯ ಜ್ಞಾನಾಂಜನಶಲಾಕಯಾ ।
ಚಕ್ಷುರುನ್ಮೀಲಿತಂ ಯೇನ ತಸ್ಮೈ ಶ್ರೀ ಗುರವೇ ನಮಃ॥

ಈ ಸುಪ್ರಸಿದ್ಧ ಶ್ಲೋಕಗಳಲ್ಲಿ ಎರಡನೆಯ ಶ್ಲೋಕದಲ್ಲಿರುವ "ಅಂಜನಶಲಾಕೆ" ಎಂದರೇನೆಂಬುದರ ಬಗ್ಗೆ ಕೆಲವು ವಿದ್ವಾಂಸರನ್ನು ಕೇಳಿದಾಗ ಅವರು ಅದಕ್ಕೆ ಸಮರ್ಪಕ ಉತ್ತರವನ್ನು ನೀಡಲಾರದೆ ಹೋದರು. 'ಅಂಜನ' ಎಂದರೆ ಕಣ್ಣಿಗೆ ಹಚ್ಚುವ ಕಾಡಿಗೆ; 'ಶಲಾಕ' ಎಂದರೆ ಕಡ್ಡಿ (ನೋಡಿ. ತದ್ಭವ ಸಲಾಕೆ). ಆದರೆ 'ಅಂಜನಶಲಾಕ' ಮಾತಿಗೆ ಬರೀ ವಾಚ್ಯಾರ್ಥವಲ್ಲ, ನಿಗೂಢವಾದ ಅರ್ಥವೂ ಇದೆ-ಇದೇ ಸರಿಯಾದ ಅರ್ಥ.

ಈ ವಿಷಯವಲ್ಲಿ ಕರ್ನಾಟಕ ಶಿಲ್ಪ ಅಕಾದೆಮಿಯ ಅಧ್ಯಕ್ಷರಾದ ಶ್ರೀ ಜಿ. ಜ್ಞಾನಾನಂದ ಅವರು ಒದಗಿಸಿದ ಮ. ಗಂಗಾಧರ ಮೂರ್ತಿಯವರ "ಪ್ರತಿಷ್ಠಾ ವಿಧಿಃ

(ಕಾಶ್ಯಪ ಶಿಲೋಕ್ತ)" ಎಂಬ ಸಂಸ್ಕೃತ ಮೂಲ, ಕನ್ನಡ ಅನುವಾದದ ಕಿರುಕೃತಿ ನನಗೆ ನಿಜವಾದ ಅರ್ಥವನ್ನು ತಿಳಿಸಿತು. (ಪು. ೪೫-೬). 'ನೇತ್ರೋನ್ಮೂಲಿತಂ' ಅಧ್ಯಾಯದಡಿ ಇರುವ ಸಂಸ್ಕೃತ ಭಾಗದ ಕನ್ನಡಾನುವಾದ ಇದು "ಗರ್ಭಗೃಹದ ಬಾಗಿಲಿಗೆ ತೆರೆಯನ್ನು ಹಾಕಿ ಶಿಲ್ಪಿಯು ಚಿನ್ನದ **ಶಲಾಕೆ** ಮತ್ತು ಬೆಳ್ಳಿಯ ಸುತ್ತಿಗೆಯಿಂದ "ಚಕ್ಷುಷಃ ಪಿತಾ" ಇತ್ಯಾದಿ ಮಂತ್ರಗಳಿಂದ ಬಲದ ಕಣ್ಣನ್ನೂ ಅನಂತರ ಅದೇ ಮಂತ್ರಗಳಿಂದ ಎಡದ ಕಣ್ಣನ್ನೂ ಸೌಮ್ಯವಾದ ತೇಜೋರೂಪವಾದ ದೃಷ್ಟಿ ಇರುವಂತೆ ನಿಲಿಸಿ ಜೇನುತುಪ್ಪ ಸಕ್ಕರೆಗಳಿಂದ ಆ ಕಣ್ಣುಗಳಿಗೆ **ಅಂಜನ** ಮಾಡಬೇಕು.....". ಎಂದರೆ, ಶಿಲ್ಪಿಯು ಒಂದು ಕಲ್ಲಿನ ದೇವತಾಮೂರ್ತಿಯನ್ನು ಕೆತ್ತಿದ ಬಳಿಕ ಅದನ್ನು ಗರ್ಭಗುಡಿಯಲ್ಲಿ ಸ್ಥಾಪಿಸಲಾಗುತ್ತದೆ. ಆದರೂ ಅದು ಶಿಲೆಯೇ. ಅದು ದೇವತಾ ಮೂರ್ತಿಯೆಂದು ಜನರು ಭಕ್ತಿಯಿಂದ ಪೂಜಿಸಬೇಕಾದರೆ ಅನುಸರಿಸಿಬೇಕಾದ ವಿಧಿ ಇದು. ಚಿನ್ನದ ಶಲಾಕೆಯ ತುದಿಯಿಂದ ಅದರ ಎರಡೂ ಕಣ್ಣುಗಳನ್ನು ಮೃದುವಾಗಿ ತಿದ್ದಬೇಕು-ಅವು ಸೌಮ್ಯವಾಗಿರುವಂತೆ. ಬಳಿಕ ಅದೇ ಚಿನ್ನದ ಕಡ್ಡಿಯ ಶಲಾಕೆಯ ತುದಿಗೆ ಜೇನುತುಪ್ಪ ಸಕ್ಕರೆಗಳನ್ನು ಮಿಶ್ರಣ ಮಾಡಿದ ಅಂಜನದಿಂದ ತಿದ್ದಬೇಕು. ಆಗ ದೇವತಾಮೂರ್ತಿ ಪೂಜಾರ್ಹವಾಗುತ್ತದೆ. ಇನ್ನೂ ಕೆಲವು ಚಿಕ್ಕ ವಿಧಿಗಳು ಇದ್ದರೂ, ಅಂಜನ ಹಚ್ಚಿದ ಶಲಾಕೆಯಿಂದ ಕಣ್ಣನ್ನು ತಿದ್ದುವುದೇ ಮುಖ್ಯವಾದ ವಿಧಿ. ತಿದ್ದಿದಾಗ ವಿಗ್ರಹವು ಮುಚ್ಚಿದ್ದ ಕಣ್ಣನ್ನು ತೆಗೆದಂತೆ. ಎಂದರೆ ಅದು (ವಿಗ್ರಹವು) ಲೋಕವನ್ನು ನೋಡುತ್ತದೆ; ಜನರೂ ತೆರೆದ ಕಣ್ಣಿನ ವಿಗ್ರಹದ ಜೊತೆ (ಭಕ್ತಿಯ) ಸಂಪರ್ಕವನ್ನು ಬೆಳಸಬಹುದು.

ಮೇಲೆ ಹೇಳಿದ ಎರಡನೆಯ ಶ್ಲೋಕದ ಅರ್ಥ ಸ್ಪಷ್ಟವಾಗುತ್ತದೆ. ಅಜ್ಞಾನವೆಂಬ ಕತ್ತಲೆಯಲ್ಲಿ ಕುರುಡನಾಗಿರುವ ಶಿಷ್ಯನ ಕಣ್ಣನ್ನು ಜ್ಞಾನವೆಂಬ ಅಂಜನವನ್ನು ಹಚ್ಚಿರುವ ಉಪದೇಶ ಅಥವಾ ಭಾಷೆ ಎಂಬ ಶಲಾಕೆಯಿಂದ ತೆರೆಯಿಸಿದ ಗುರುವಿಗೆ ನಮಸ್ಕಾರ. ಮೊದಲು ಶಿಷ್ಯನು ಶಿಲೆಯ ಶಿಲ್ಪದಂತೆ ಕಣ್ಣಿದ್ದೂ ಕುರುಡನಾಗಿದ್ದ, ಆಕಾರವನ್ನು ಪಡೆದ ಶಿಲೆಯ ಶಿಲ್ಪದಂತಿದ್ದ. ಗುರುವು ಆ ಶಿಲೆಯ ಶಿಲ್ಪದಂತಿದ್ದ ಶಿಷ್ಯನ ಕಣ್ಣು ಜ್ಞಾನವೆಂಬ ಅಂಜನ ಹಚ್ಚಿದ ಮಾತಿನ ಶಲಾಕೆಯ ಸ್ಪರ್ಶವಾದ ಕೂಡಲೆ ಕುರುಡುತನ ಹೋಗಲಾಡಿಸಿಕೊಂಡು ನೋಡುವ ಶಕ್ತಿ ಪಡೆದುಕೊಳ್ಳುತ್ತದೆ. ಗುರು ನೀಡುವ ಜ್ಞಾನವು ಶಿಷ್ಯನ ಕಣ್ಣು ತೆರೆಯಿಸಿ ಲೋಕವನ್ನು ಮಾತ್ರವಲ್ಲ, ಲೋಕದಾಚೆ ಇರುವುದನ್ನೂ ನೋಡುವ ಶಕ್ತಿಯನ್ನು ನೀಡುತ್ತದೆ.

ಶಿಷ್ಯನಿಗೆ ಜ್ಞಾನವನ್ನು ಬೋಧಿಸುವ ಗುರುವೂ ಒಂದು ಕಾಲದಲ್ಲಿ ಶಿಷ್ಯನೇ ಆಗಿದ್ದು ಅವನೂ ಗುರು ಅನುಗ್ರಹಿಸಿದ ಜ್ಞಾನದಿಂದ ಬೆಳಕು ಕಂಡವನು. ಮೇಲಿನ ಶ್ಲೋಕದ ವಾಚ್ಯಾರ್ಥ ಸ್ಪಷ್ಟ; ಅದರ ಲಕ್ಷ್ಯಾರ್ಥವು ಅಪೂರ್ವ, ಧ್ವನ್ಯರ್ಥವಂತೂ ಚಿಂತಿಸಿದಷ್ಟು ವಿಸ್ತಾರವಾಗುತ್ತ ಹೋಗುತ್ತದೆ.

‘ಅಂಜನ ಶಲಾಕೆ’ ಎಂಬುದು ತಿಳಿಯದೆ ಕುರುಡನಾಗಿದ್ದ ನನಗೆ ಅದರ ಅರ್ಥವನ್ನು ತಿಳಿಸಿ ಬೆಳಕನ್ನು ನೀಡಿದ ಗುರು “ಪ್ರತಿಷ್ಠಾವಿಧಿ ಕೃತಿ” ಮತ್ತು ಅದರ ಕನ್ನಡ ಅನುವಾದಕರಾದ ಶ್ರೀ ಗಂಗಾಧರಮೂರ್ತಿಯವರು ಎನ್ನಬಹುದಲ್ಲವೇ?

**೨೮. “ಸ್ಫಟಿಕದ ಶಲಾಕೆ”**

“ಅಂಜನ ಶಲಾಕೆ” ಮಾತಿನ ಅರ್ಥ ಬಸವಣ್ಣನವರಲ್ಲಿ ಬರುವ ವಚನವೊಂದರ ಮೇಲೆ ಬೆಳಕು ಬೀರುತ್ತದೆ :

ನುಡಿದರೆ ಮುತ್ತಿನ ಹಾರದಂತಿರಬೇಕು
ನುಡಿದರೆ ಮಾಣಿಕ್ಯದ ದೀಪ್ತಿಯಂತಿರಬೇಕು
ನುಡಿದರೆ ಸ್ಫಟಿಕದ ಶಲಾಕೆಯಂತಿರಬೇಕು
ನುಡಿದರೆ ಲಿಂಗಮೆಚ್ಚಿ ಅಹುದಹುದೆನಬೇಕು
ನುಡಿಯೊಳಗೆ ನಡೆಯದಿದ್ದರೆ
ಕೂಡಲಸಂಗಮದೇವನೆಂತೊಲಿವನಯ್ಯಾ.

ಭಕ್ತ ಅಥವಾ ಸಾಧಕನು ಮಾತನಾಡಿದರೆ ಮುತ್ತುಗಳನ್ನು ಪೋಣಿಸಿದ ಹಾರದಂತಿರಬೇಕು (ಮಾತುಗಳು ಕ್ರಮಬದ್ಧವಾಗಿರಬೇಕು); ಮಾಣಿಕ್ಯದ ಬೆಳಕಿನಂತಿರಬೇಕು (ಮಾಣಿಕ್ಯವು ಸ್ವಯಂ ದೀಪ್ತವಾಗಿರುವಂತೆ ಮಾತುಗಳು ಅರ್ಥವನ್ನು ತಾವಾಗಿ ಕೊಡಬೇಕು); ಸ್ಫಟಿಕದ ಶಲಾಕೆಯಂತಿರಬೇಕು (ಅಂಜನ ಹಚ್ಚಿದ ಸ್ಫಟಿಕವು ವಿಗ್ರಹದ ಕಣ್ಣು ತರೆಯಿಸಿದಂತೆ ಮಾತುಗಳು ಕೇಳುಗನ ಕಣ್ಣು ತೆರೆಯಿಸಬೇಕು, ಅವನಿಗೆ ಜ್ಞಾನೋದಯವಾಗುವಂತೆ ಮಾಡಬೇಕು). ನುಡಿದರೆ ಲಿಂಗವು ಮೆಚ್ಚಿ ಹೌದು ಹೌದು ಎಂದು ತಲೆದೂಗಬೇಕು (ನುಡಿಯಲ್ಲಿ ಪ್ರಾಮಾಣಿಕತೆ ಇದ್ದರೆ ಲಿಂಗವು ಅಥವಾ ಭಗವಂತನು ಮೆಚ್ಚುತ್ತಾನೆ). ತನ್ನ ನುಡಿಗೆ ತಕ್ಕಂತೆ ನಡೆಯದಿದ್ದರೆ ಭಗವಂತನು ಅವನನ್ನು ಒಲಿಯುವುದಿಲ್ಲ.

ಹಿಂದೆ ನೋಡಿದಂತೆ, ‘ಕಾಶ್ಯಪ ಸೂತ್ರ’ದ ಪ್ರಕಾರ ಶಲಾಕೆಯು ಚಿನ್ನದ್ದು. ಆದರೆ ಬಸವಣ್ಣನವರ ವಚನವನ್ನು ಗಮನಿಸಿದರೆ ವಿಗ್ರಹದ ನಯನೋನ್ಮೀಲನಕ್ಕೆ ಸ್ಫಟಿಕ ಅಥವಾ ಬೆಣಚು ಕಲ್ಲಿನ ಕಡ್ಡಿ ಆಕಾರದ ತುಂಡನ್ನೂ ಬಳಸುತ್ತಿದ್ದಿರಬಹುದು. ಶಲಾಕೆಯು ಕಬ್ಬಿಣವನ್ನು ಹೊರತುಪಡಿಸಿ (ಕಬ್ಬಿಣವು, ಪವಿತ್ರ ಕಾರ್ಯಗಳಲ್ಲಿ ನಿಷಿದ್ಧ) ಯಾವುದೇ ಲೋಹದ್ದೂ ಆಗಿರಬಹುದು; ಶಿಲೆಯೂ ಆಗಬಹುದು. ಅಥವಾ ನಾವು ಕೇಳಿರುವಂತೆ ಕಡ್ಡಿಯ ತುದಿಗೆ ಸಿಕ್ಕಿಸಿದ ಹೂವೂ ಆಗಬಹುದು.

## ೨೯. ಪರಪ್ಪನ ಅಗ್ರಹಾರ :

ಬೆಂಗಳೂರಿನ ಪರಪ್ಪನ ಅಗ್ರಹಾರ ಜೈಲು ಈಗ ಜಗತ್‌ಪ್ರಸಿದ್ಧ; ಅದರಲ್ಲಿ ೧೯೮೨ರ ಗೋಕಾಕ್ ಚಳವಳಿ ಸಂದರ್ಭದಲ್ಲಿ ನನ್ನನ್ನು ಬಂಧಿಸಿದ್ದು, ಮಾರನೆಯ ದಿನ ಸೆಂಟ್ರಲ್ ಕಾಲೇಜಿನ ಪಕ್ಕದ ಜೈಲಿಗೆ ವರ್ಗಾಯಿಸಲಾಗಿತ್ತು. ಆ ಅಗ್ರಹಾರವು ಆಗ ಬೆಂಗಳೂರಿನಿಂದ ಹೊರಗಿದ್ದು, ಅದರ ನಿರ್ಮಾಣಕ್ಕೆ ಕಾರಣಕರ್ತನಾದ ಯಾವನೋ ಪರಪ್ಪ ಎಂಬ ವ್ಯಕ್ತಿಯ ಹೆಸರನ್ನು ಹೊಂದಿದೆ. 'ಪರಪ್ಪ' ಎಂದರೆ ಏನು? ಅಪ್ಪ ಹಿಂದಿನ 'ಪರ' ಎಂಬುದು ಬಹುಶಃ ಪರ್ವತಪ್ಪದಿಂದ ಬಂದಿರುವಂತಿದೆ. (ಪರ್ವತ+ಅಪ್ಪ). ಹಳ್ಳಿಗಳಲ್ಲಿ ಪಾರ್ವತವ್ವ ಎಂಬ ಹೆಸರನ್ನು ಪಾರವ್ವ ಎಂದು ಸಂಕ್ಷೇಪಗೊಳಿಸುತ್ತಿದ್ದರು. ನನ್ನ ಅವ್ವನ ಹೆಸರು ಪಾರ್ವತವ್ವ ಅಥವಾ ಪಾರವ್ವ. ಹಾಗೆಯೇ ಪರಪ್ಪ ಎಂಬುದು ಪರ್ವತಪ್ಪ (=ಶೈಲಪ್ಪ) ಎಂಬುದರಿಂದ ಬಂದಿರುವಂತಿದೆ. ಪಾರ್ವತಪ್ಪ ಎಂಬ ಪುರುಷರ ಹೆಸರನ್ನು ನಾನು ಇಲ್ಲಿಯವರೆಗೆ ಕೇಳಿಲ್ಲ.

ಹರಪನ ಹಳ್ಳಿ ಎಂಬುದರ ಮೂಲ ಹರಪ್ಪ (ಹರ+ಅಪ್ಪ). ಹರಪ್ಪ →ಹರಪ. ಬಳ್ಳಾರಿ ಪ್ರದೇಶದಲ್ಲಿ ವ್ಯಕ್ತಿನಾಮಗಳ ಮಧ್ಯದ ದ್ವಿತ್ವವು ಸರಳಗೊಳ್ಳುವುದು ರೂಢಿ. ಉದಾ.ಗೆ ಹಂಪಣ್ಣಗೌಡ→ಹಂಪನ ಗೌಡ, ಮಲ್ಲಪ್ಪನ ಗುಡಿ (=ಮಲ್ಲಿಕಾರ್ಜುನ) →ಮಲಪನ ಗುಡಿ, ಸಿದ್ಧವ್ವನ ಹಳ್ಳಿ→ಸಿದ್ದವನ ಹಳ್ಳಿ. ಕಲ್ಪಿತ ವ್ಯಕ್ತಿನಾಮ 'ಹರಪ್ಪ' ದಿಂದ 'ಹರಪ' ಬಂದಿದೆಯೆಂದು ಹೇಳುವಲ್ಲಿ ಒಂದು ಸಮಸ್ಯೆ ಇದೆ. ಬಳ್ಳಾರಿ ಅಥವಾ ಇತರ ಪ್ರದೇಶಗಳಲ್ಲಿ ಶಿವಪ್ಪ, ಸಿದ್ಧಪ್ಪ ಇದ್ದಂತೆ ಹರಪ್ಪ ಎಂಬ ಹೆಸರು ಇಲ್ಲವೇ ಇಲ್ಲ. ಹೀಗಿರುವಾಗ ಪರ್ವತಪ್ಪ→ಪರಪ್ಪ→ಹರಪ್ಪ→ಹರಪ ಹೀಗೆ ಬಂದಿರುವ ಸಾಧ್ಯತೆಗಳೂ ಇವೆ. ವ್ಯಕ್ತಿನಾಮದ ನಿಷ್ಪತ್ತಿ ವಿಚಾರ ಯೋಗ್ಯ. (ಹರಪ್ಪ ಎಂಬ ಉತ್ತರ ಭಾರತದ ಪ್ರಾಚೀನ ಸಂಸ್ಕೃತಿ ಕೇಂದ್ರದ ಹೆಸರಿಗೂ ಕನ್ನಡದ ಹರಪ್ಪಕ್ಕೂ ಏನೂ ಸಂಬಂಧವಿಲ್ಲ.)

## ೩೦. "ಅರಸರ ಗುಹೆ" : ಕ್ರಿಯಾಶಕ್ತಿಗಳ ಪೂಜಾ(ವಾಸ)ಗೃಹ

೨೦.೬.೮೫ರಂದು ಹಂಪಿಯಲ್ಲಿ ವಿರೂಪಾಕ್ಷ ದೇವಾಲಯದ ಹಿಂಭಾಗದಲ್ಲಿ ಅರ್ಧ ಕಿಲೋಮೀಟರ್ ದೂರದಲ್ಲಿ, ಹೇಮಕೂಟದ ಪಶ್ಚಿಮದಿಕ್ಕಿನ ಕೆಳಗೆ ಇರುವ 'ಅರಸರ ಗುಹೆ' ಎಂಬ ಗುಹೆಯನ್ನು ಅಲ್ಲಿನ ಶ್ರೀ ಶಿವಾನಂದ ಆಶ್ರಮದ ಶ್ರೀ ಸದಾಶಿವ-ಯೋಗಿಗಳು ತೋರಿಸಿದ್ದರು. ಅಲ್ಲಿ ವಿಜಯನಗರ ಕಾಲದ ನೀರಿನ ಕಾಲುವೆ ಇದೆ. ಅಲ್ಲೇ ಸಮೀಪ ಬೇರೆ ಗುಹೆಗಳಿವೆ. ಅವುಗಳಲ್ಲಿ ಒಂದು 'ಅರಸರ ಗುಹೆ' ಅಥವಾ ಅರಸರ ಗವಿ. ಗುಹೆಯ ಒಳಗೆ ಕಲ್ಲು ಮಣ್ಣಲ್ಲಿ ಕಟ್ಟಿದ ಗೋಡೆ ಇದೆ; ಸಮೀಪವೇ

ನಂದಿ, ಶಿವಲಿಂಗದ ಭಗ್ನ ಪಾಣಿಪೀಠ ಇವೆ. (ಅಥವಾ ಇತ್ತು). ಆ ಗುಹೆಯ ಹೆಸರು ಅರ್ಥಪೂರ್ಣವಾಗಿದ್ದರೂ ಅದರ ಮಹತ್ವವೇನು ಎಂಬುದು ಹೊಳೆದಿರಲಿಲ್ಲ.

ಈಚೆಗೆ ನನಗೆ ಅನ್ನಿಸಿದ್ದು-೧೩೩೬ರಲ್ಲಿ ವಿಜಯನಗರ ಸ್ಥಾಪಿಸಿದ ಹಕ್ಕ ಬುಕ್ಕರ ರಾಜಗುರು ಎಂದೇ ಶಾಸನಗಳಲ್ಲಿ ಉಕ್ತವಾಗಿರುವ ಕಾಶಿವಿಲಾಸ ಕ್ರಿಯಾಶಕ್ತಿಗಳು ವಿದ್ಯಾರಣ್ಯರ ಜೊತೆ ಸೇರಿ ವಿಜಯನಗರ ಸಾಮ್ರಾಜ್ಯ ಸ್ಥಾಪನೆ ಮಾಡಿಸಿದರು. ಕ್ರಿಯಾಶಕ್ತಿ ಸ್ಪಷ್ಟವಾಗಿ ಲಕುಲೀಶ ಪಾಶುಪತ ಸಂಪ್ರದಾಯಕ್ಕೆ ಸೇರಿದ ಯತಿ (ವಿದ್ಯಾರಣ್ಯರು ಶೃಂಗೇರಿ ಪರಂಪರೆಯ ಅದ್ವೈತಿ ಬ್ರಾಹ್ಮಣರು).

ಲಕುಲೀಶ ಪಾಶುಪತಿಗಳು ಬ್ರಹ್ಮಚಾರಿಗಳಾಗಿದ್ದು, ದೇವಸ್ಥಾನಗಳಲ್ಲಿ ವಾಸಿಸುತ್ತ, ವಿದ್ಯಾರ್ಥಿಗಳಿಗೆ ಶಿಕ್ಷಣವನ್ನು ನೀಡುತ್ತಿದ್ದವರು. ಅವರಿಗೂ ಶಿವ ದೇವಸ್ಥಾನಗಳಿಗೂ ಎಲ್ಲಿಲ್ಲದ ನಂಟು. ರಾಜಗುರುವಾಗಿದ್ದ ಕ್ರಿಯಾಶಕ್ತಿ ಬಹುತೇಕ ವಿರೂಪಾಕ್ಷ ದೇವಾಲಯದಲ್ಲಿ ಪೂಜಾದಿಗಳ ಉಸ್ತುವಾರಿ ನೋಡಿಕೊಂಡು ಅಲ್ಲೇ ಇದ್ದರೂ, ಎಲ್ಲ ಮುನಿಗಳಿಗೂ ಇದ್ದಂತೆ ದೇವಾಲಯಕ್ಕೆ ಹೊಂದಿಕೊಂಡಂತಿರುವ ಪ್ರತ್ಯೇಕ ಮಠದಲ್ಲಿ ತಮ್ಮ ದೈನಂದಿನ ಲೌಕಿಕ ಕಾರ್ಯಗಳನ್ನು ನೆರವೇರಿಸುತ್ತಿದ್ದರು : ಸ್ನಾನ, ಊಟ, ಮಲವಿಸರ್ಜನೆ. ಇ. ಬಹುಶಃ ಕ್ರಿಯಾಶಕ್ತಿಗಳು ವಾಸವಾಗಿದ್ದ ಮಠವೇ ಈಗಿನ ಅರಸರ ಗುಹೆ ಇರಬಹುದು. ಅರಸರ ಗುರುವಾಗಿದ್ದ ಅವರು ರಾತ್ರಿ ಹೊತ್ತು ಆ ಗುಹೆಯಲ್ಲಿದ್ದು ಹಗಲನ್ನು ದೇವಸ್ಥಾನದಲ್ಲಿ ಕಳೆದು ಆ ಗುಹೆಯಲ್ಲಿ ವಿಶ್ರಾಂತಿ ಪಡೆಯುತ್ತಿದ್ದರು. ಅರಸರ ಗುಹೆಯಲ್ಲಿ ಯತಿಗಳು ವಾಸಿಸಲಿಕ್ಕೆ ಬೇಕಾದ ಒಳ ಕೊಠಡಿಯೂ ಇತ್ತು (ಈಗಲೂ ಆ ಗೋಡೆ ಅಲ್ಲೇ ಉಳಿದಿದೆ). ರಾತ್ರಿ ದುಷ್ಟ ಜಂತುಗಳಿಂದ ರಕ್ಷಿಸಿಕೊಳ್ಳಲು ಆ ಗೋಡೆ ಅಗತ್ಯವಿತ್ತು. ಅವರ ವೈಯಕ್ತಿಕ ಪೂಜೆಗಾಗಿ ಅಲ್ಲೇ ನಂದಿ, ಶಿವಲಿಂಗ ಇದ್ದವು. ಈ ಊಹೆ ಮಾಡಲು ಗುಹೆಯ ಒಳರಚನೆ, ಶಿಲ್ಪ, ಸ್ಥಳ ಅವಕಾಶಮಾಡಿ ಕೊಡುತ್ತದೆ. ಹೀಗೆ ಹೇಳಲು ಆಧಾರವೇನೂ ಇಲ್ಲ. ಆಧಾರವೂ ಸಿಗಲಾರದು. ಆದರೆ ನನ್ನ ಊಹೆಯನ್ನು ಕೆಲವು ವಿದ್ವಾಂಸರ ಮುಂದೆ ಹಂಚಿಕೊಂಡಾಗ ಆ ಊಹೆ ಸತ್ಯವಾಗಿರುವ ಸಾಧ್ಯತೆ ಇದೆ ಎಂದರು.

ನನ್ನ ಊಹೆ (guess) ಪ್ರಮೇಯದ ಮಟ್ಟಕ್ಕೆ (hypothesis) ಏರುವ ಸಾಧ್ಯತೆ ಇದೆ.

**೩೧. 'ಮೊನ್ನೆ' - 'ನಾಳಿ(ಡಿ)ದ್ದು' :**

ನಿನ್ನೆ, ಇಂದು, ನಾಳೆ ಇವು ಪ್ರತ್ಯೇಕ ಸ್ವತಂತ್ರ ಪದಗಳು. ಆದರೆ ಮೊನ್ನೆ, ನಾಳಿ(ಡಿ)ದ್ದು ಪದಗಳು ಎರಡು ಪದಗಳು ಸೇರಿರುವ ಸಮಾಸಗಳು. ಅವುಗಳ ನಿಷ್ಪತ್ತಿ ಬಹುಶಃ ಹೀಗೆ : ಮೊತ್(ದ್)+ನಿನ್ನೆ→ಮೊನ್ನೆ; ನಾಳೆ+ಇದ್ದು→ನಾಳಿದ್ದು (ನಾಡಿದ್ದು).

ಮುತ್-ಅಥವಾ ಮೊತ್-ಎಂದರೆ ಹಳೆಯದು, ಹಿಂದಿನದು. ನೋಡಿ : ಮುದಲ್ ಅಥವಾ ಮೊದಲ್, ಮುದುಕ, ಮುತ್ತಜ್ಜ, ಮುತ್ತೈದೆ (ವಯಸ್ಕಳಾಗಿದ್ದರೂ ಅವಿಧವೆ ಅಥವಾ ಅಯ್ದೆ ಎಂದರೆ ಗಂಡ ಬದುಕಿರುವವಳು.) ನಿನ್ನೆಯ ಹಿಂದಿನದ್ದೇ, ಹಿಂದಿನ ದಿನವೇ ಮೊನ್ನೆ. ನಾಳೆ+ಇದ್ದು→ನಾಳಿದ್ದು, ಎಂದರೆ ನಾಳೆ ಕಳೆದು ಅಥವಾ ಮುಗಿದು ಬಂದಿರುವ ದಿನ. ಈ ಊಹೆಗಳು ಬಹುಶಃ ಸಾಧಾರವೆಂದು ಭಾವಿಸಿದ್ದೇನೆ.

**ವಿಚಾರಪತ್ನಿ :**

**೩.೨. 'ವಿಚಾರ ಪತ್ನಿ' : 'ವಿರೂಪಾಕ್ಷ ಸಂಗ' :**

"ಬಸವನ ಅನುಭಾವದಿಂದ ವಿವರವ ಕಂಡು ವಿಚಾರಪತ್ನಿಯಾದೆನಯ್ಯಾ ಸಂಗಯ್ಯಾ" ಎಂದೇ ಹೇಳಿಕೊಂಡಿದ್ದಾಳೆ, ಬಸವಣ್ಣನವರ ಪತ್ನಿ ನೀಲಲೋಚನೆ (ಶಿವಶರಣೆಯರ ವಚನ ಸಂಪುಟ. ಪು. ೨೫೭). ಬಸವಣ್ಣನವರ ಪತ್ನಿಯಾದ ಅವಳು ಅವನ ಲೋಕಾನುಭವದ ವಿವರಗಳನ್ನು ಬಲ್ಲವಳು-ತನ್ಮೂಲಕ ಲೋಕವನ್ನೂ ಬಲ್ಲವಳು. ಆ ಹಿನ್ನೆಲೆಯಲ್ಲಿ ತಾನು ಅವರ 'ವಿಚಾರಪತ್ನಿ' ಎಂದು ಅವಳು ಹೇಳಿಕೊಂಡಿರುವುದು ಬಹು ಅರ್ಥಪೂರ್ಣ. ಕಂಡದ್ದನ್ನೆಲ್ಲ, ಇರುವ ಸ್ಥಿತಿಯನ್ನೆಲ್ಲ (ಉದಾ : ಅಸ್ಪೃಶ್ಯತೆ) ಒಪ್ಪಿಕೊಳ್ಳುವುದಕ್ಕಿಂತ, ಯಾವುದು ಸರಿ ಯಾವುದು ತಪ್ಪು ಎಂಬುದನ್ನು ವಿಚಾರಕ್ಕೆ ಒಳಪಡಿಸುವುದನ್ನು ತಾನು ಲೋಕಾನುಭವಿ ಗಂಡನಿಂದ ಕಲಿತು 'ವಿಚಾರಪತ್ನಿ'ಯಾದೆ (Intellectual Consort) ಎಂದು ಹೇಳಿಕೊಂಡಿದ್ದಾಳೆ. ಅದೇ ನೀಲಲೋಚನೆ ಇನ್ನೊಂದೆಡೆ (ಪು. ೩೬೨) "ವಿರೂಪಾಕ್ಷ ಸಂಗವನನುಭವಿಸಿದೆನಯ್ಯಾ ಬಸವಯ್ಯಾ, ಸಂಗಯ್ಯಾ, ಬಸವ ವರಪ್ರಣವ ಸ್ವರೂಪನಾಯಿತ್ತು"-ಎಂದಿದ್ದಾಳೆ. ಪಾರ್ವತಿಯು ವಿರೂಪಾಕ್ಷನ (ಉರಿಗಣ್ಣ) ಪತ್ನಿಯಾಗಿ ಪಡೆದ ಅನುಭವವೇ ತನ್ನದು ಎಂದಿದ್ದಾಳೆ. ವಿರೂಪಾಕ್ಷ ಸದಾ ಅಂತರ್ಮುಖಿ, ಧ್ಯಾನಸ್ಥ, ಒಟ್ಟಾರೆ ಲೌಕಿಕ ಸುಖಗಳಿಂದ ದೂರವಾಗಿರುವವನು, ಹಣೆಗಣ್ಣ-ಎಂದರೆ ಸೌಮ್ಯನಾಗಿದ್ದರೂ ದುಷ್ಟರು ಕಂಡಾಗ ಮೂರನೆಯ ಕಣ್ಣಿನ ಬಿಸಿಯಿಂದ ಸುಡಬಲ್ಲವನು. ಸದಾ ಸಮಾಜಮುಖಿಯಾಗಿ ಚಿಂತಿಸುತ್ತ, ಜನರ ಸಮಾಜದ ಕಷ್ಟಸುಖಗಳಿಗೆ ಸದಾ ಸ್ಪಂದಿಸುತ್ತಿದ್ದ ಬಸವಣ್ಣ ತನ್ನ ಪತ್ನಿಯರನ್ನು ಉದಾಸೀನ ಮಾಡದಿದ್ದರೂ ಅದರಿಂದಾಗಿ ಅವನ ಪತ್ನಿ ನೀಲಲೋಚನೆಗೆ ಒಮ್ಮೊಮ್ಮೆ ಒಂದು ಬಗೆಯ ಬೇಸರವೂ ಬರುತ್ತಿದ್ದಿರಬಹುದು-ಪಾರ್ವತಿಯಂತೆ. ಅವಳ ವಚನಗಳನ್ನು ನೋಡಿದರೆ ಅವಳು ತನ್ನ ಗಂಡನನ್ನು ಬಹುವಾಗಿ ಮನಸ್ಸಿಗೆ ಹಚ್ಚಿಕೊಂಡವಳೆಂಬುದು ಸ್ಪಷ್ಟವಾಗುತ್ತದೆ. ವಿರೂಪಾಕ್ಷನಿಗಾಗಿ ತಪಸ್ಸು ಮಾಡಿ ಅವನನ್ನು ಒಲಿಸಿಕೊಂಡು ಸಂತೋಷದಿಂದ ಸಂಸಾರಮಾಡಿದ ಪಾರ್ವತಿಯ ಜೊತೆ ತನ್ನನ್ನು ಹೋಲಿಸಿಕೊಂಡಿರುವುದು ಬಹು ವಿಚಾರಣೀಯ ಮತ್ತು ಅರ್ಥಪೂರ್ಣ.

■■



ಇದು "ಸಂಶೋಧನೆ" ಮತ್ತು "ಪಾಂಡಿತ್ಯರಸ" ಎಂಬ ಎರಡು ಕೃತಿಗಳನ್ನು, ಕೆಲವು ಬಿಡಿ ಲೇಖನಗಳನ್ನು ಒಳಗೊಂಡಿದೆ. "ಸಂಶೋಧನೆ" ಕೃತಿಯಲ್ಲಿ ಸಂಶೋಧನೆಯ ವಿವರಣೆ, ವಿಧಾನ, ಅನುಸರಿಸಬೇಕಾದ ತತ್ವ-ಮಾರ್ಗ ಇವುಗಳ ನಿರೂಪಣೆಯಿದ್ದರೆ, "ಪಾಂಡಿತ್ಯರಸ"ದಲ್ಲಿ ಮುಖ್ಯವಾಗಿ ಕೆಲವು ಅನುಭವಗಳ ನಿರೂಪಣೆ ಮತ್ತು ಆ ಅನುಭವಗಳ ಹಿನ್ನೆಲೆ, ಅವು ಬೀರಿರುವ ಹೊಸ ಬೆಳಕು ಇವುಗಳ ನಿರೂಪಣೆ ಇದೆ. ಒಂದು ತಾತ್ವಿಕ ಸ್ವರೂಪದ್ದು, ಇನ್ನೊಂದು ಪ್ರಾಯೋಗಿಕ ಸ್ವರೂಪದ್ದು-ಆದರೆ ಅವರೆಡೂ ಭಿನ್ನವೇನೂ ಅಲ್ಲ, ಬಿಡಿಲೇಖನಗಳಲ್ಲಿ ಆ ಎರಡರ ಸಮ್ಮಿಶ್ರಣವೂ ಇದೆ.

ಇವೆಲ್ಲವೂ ಸಂಶೋಧಕನಾಗಿ ನಾನು ಅನುಸರಿಸಿದ ಮಾರ್ಗ, ಕಂಡುಕೊಂಡ ಸತ್ಯಗಳು, ಪ್ರಮೇಯಗಳು, ಊಹೆಗಳು, ಅಲ್ಲಲ್ಲಿ ನನಗಾಗಿರುವ ವಿನೂತನ ಅನುಭವಗಳನ್ನೊಳಗೊಂಡಿವೆ. ಈ ಕೃತಿಯನ್ನು "ಸಂಶೋಧನೆಯ ಮೂಲತತ್ವಗಳು" ಎಂದೂ ಉಪಶೀರ್ಷಿಕೆಯಲ್ಲಿ ಕರೆದಿದೆ. ಈ ಕೃತಿ ಮುಖ್ಯವಾಗಿ ಯುವ ಸಂಶೋಧಕರನ್ನು ಗಮನದಲ್ಲಿಟ್ಟುಕೊಂಡು ರಚಿತವಾಗಿದೆ. ಪಿಎಚ್.ಡಿ. ಪದವಿಗಾಗಿ ಕೆಲಸ ಮಾಡುವವರು ವಿಷಯದ ಆಯ್ಕೆ, ಆರಂಭದಲ್ಲಿ ಕೈಗೊಳ್ಳಬೇಕಾದ ಶ್ರಮಪೂರ್ಣ ಕಾರ್ಯ, ಟಿಪ್ಪಣಿ, ಬರವಣಿಗೆ, ವಹಿಸಬೇಕಾದ ಎಚ್ಚರ, ಊಹೆ-ಪ್ರಮೇಯ-ಸಿದ್ಧಾಂತ ಇವುಗಳ ಬಗ್ಗೆ ಇರಬೇಕಾದ ಎಚ್ಚರ, ಸಂಶೋಧನೆಯ ಭಾಷೆ, ಪ್ರಾಮಾಣಿಕತೆ, ಮಾರ್ಗದರ್ಶಕರ ಕರ್ತವ್ಯ ಇವುಗಳನ್ನು ಅಲ್ಲಲ್ಲಿ ಯಥೋಚಿತವಾಗಿ ಸೂಚಿಸಿದೆ. ಸಂಶೋಧನೆಯೂ ಕೂಡ ಸಾಹಿತ್ಯ ವಿಮರ್ಶೆಯಂತೆಯೇ ಒಂದು ಸೃಜನಾತ್ಮಕ ಕ್ರಿಯೆ ಎಂಬುದನ್ನು ಸೂಚಿಸಿದೆ. ಭಾಷೆ ಅಥವಾ ಸಾಹಿತ್ಯದ ಮೇಲೆ, ಸಂಸ್ಕೃತಿಯ ಮೇಲೆ ಸಂಶೋಧನೆ ಬೀರಿರುವ ಬೆಳಕಿನ ಉದಾಹರಣೆಗಳೂ ಇವೆ.

ಈ ಕೃತಿಯಿಂದ ಯುವ ಸಂಶೋಧನ ವಿದ್ಯಾರ್ಥಿಗಳಿಗೆ ಒಂದು ಬಗೆಯ ಸ್ಥೂಲ ಮಾರ್ಗದರ್ಶನ, ಅಷ್ಟೇ ಉತ್ತೇಜನ ದೊರಕುತ್ತದೆ. ಪ್ರಬುದ್ಧ ಸಂಶೋಧಕರಿಗೂ ಇದರ ಅಧ್ಯಯನದಿಂದ ಲಭ್ಯವಾಗದೇ ಇರಲಾರದು. ಇದೊಂದು ಯುವ ಸಂಶೋಧಕರಿಗಂತೂ ಲಾಭದಾಯಕ. ಯಾವುದೇ ಸಂಶೋಧಕನಿಗೂ ಮಾರ್ಗದರ್ಶಿ ಆ ಸಂಶೋಧಕನೇ ಎಂಬುದನ್ನು ಮರೆಯಬಾರದು.

– ಡಾ.ಎಂ. ಚಿದಾನಂದಮೂರ್ತಿ

ಪ್ರಿಯದರ್ಶಿನಿ ಪ್ರಕಾಶನ

138, 7ನೇ 'ಸಿ' ಮುಖ್ಯರಸ್ತೆ, ಹಂಪಿನಗರ, ಬೆಂಗಳೂರು–40